# ಅಭಿಷೇಕ ನಾಟಕ



ಭಾಸ ಮಹಾಕವಿ

ಅನುವಾದಕ:

ಪಂಡಿತ ಬಿ. ನಂಜುಂಡಸ್ವಾಮಿ

## EDITORIAL

The first annotated edition of Pañcarātram, chiefly based on a Telugu manuscript, was published in 1943 by the then Sanskrit Literature Society, Bangalore. In the present volume, although the Sanskrit text of the play is almost a reprint of the first edition, the English translation and notes have been thoroughly revised and up-to-date information about Bhāsa and his works is given in the Introduction which has been rewritten to make it exhaustive. The different readings fouud in the various printed editions are given at the foot of each page and indicated by the following symbols.—

G.— Pañcarātram. Edited by T. Ganapati Sastri with a commentary; 1917.

Gn. — Variants noticed by T. Ganapati Sastri in his edition.

P. — Pañcarātram : Edited by S. M. Paranjpe, Poona; 1917.

Pn. — Variants noticed by S. M. Paranjpe.

U. — Pañcarātram : Edited by W.G. Urdhwareshe, Indore, 1920.

Un.— Variants noticed by W.G. Urdhwareshe.

A.—Pañcarātram : M.V. Agashe's edition, Poona, 1917.

D. — Pañcarātram in Bhāsa-Nāṭaka-Cakram : Edited by C. R. Devadhar.

L. — The Telugu manuscript of Pañcarātram.

# ಪೀಠಿಕೆ

## ೧ ಭಾಸ: ಅವನ ಕಾಲ, ದೇಶ ಮತ್ತು ಕೃತಿಗಳು

### I ಭಾಸನನ್ನು ಕುರಿತ ತೊಡಕಿನ ಪ್ರಶ್ನೆ

ತಿರವಾಂಕೂರಿನ ಪಂಡಿತ ಗಣಪತಿಶಾಸ್ತ್ರಿಗಳು[1] ಕ್ರಿ. ಶ. 1912–14 ರಲ್ಲಿ ಈ ಕೆಳಗೆ ಕಂಡ ೧೩ ನಾಟಕಗಳನ್ನು[2] ಪತ್ತೆಮಾಡಿ ಪ್ರಕಟಿಸಿ ಅವು ಭಾಸ ಕೃತವೆಂದು ಸಾರಿದರು. ಅಲ್ಲಿಯವರೆಗೆ, ಭಾಸನೊಬ್ಬ ಮಹಾಕವಿ; ಕಾಳಿದಾಸನಿಗಿಂತ ಹಿಂದಿನವನು; [3]ಕಾಳಿದಾಸ [4]ಬಾಣ ಮೊಲಾದ ಅನೇಕರು[5] ಅವನನ್ನು ಹೊಗಳಿದ್ದಾರೆ— ಎಂಬಷ್ಟು ಮಾತ್ರ ನಮಗೆ ತಿಳಿದಿತ್ತು.

| | | |
|---|---|---|
| ೧ | ಪ್ರತಿಜ್ಞಾಯೌಗಂಧರಾಯಣ | ಬೃಹತ್ಕಥೆಯ(?) ಆಧಾರದ ಮೇಲೆ ರಚಿತವಾದುವು |
| ೨ | ಸ್ವಪ್ನವಾಸವದತ್ತ | |
| ೩ | ಅವಿಮಾರಕ | |
| ೪ | ಪ್ರತಿಮಾ | ರಾಮಾಯಣ |
| ೫ | ಅಭಿಷೇಕ | |

---

1. ೧೯೦೯ ರಲ್ಲಿ ತಮಗೆ ಮೊದಲು ೧೦ ರೂಪಕಗಳಿರುವ ಒಂದು ಓಲೆಗರಿ ಪುಸ್ತಕ ದೊರೆತಂತೆಯೂ ಸ್ವಲ್ಪಕಾಲದ ಬಳಿಕ ನಾವು ಮೇಲೆ ಕೊಟ್ಟಿರುವ ಪಟ್ಟಿಯಲ್ಲಿನ ೪,೫ ಮತ್ತು ಅನೇ ಸಂಖ್ಯೆಯ ರೂಪಕಗಳ ಮಾತೃಕೆಗಳು ದೊರೆತುದಾಗಿಯೂ ಶ್ರೀ ಗಣಪತಿಶಾಸ್ತ್ರಿಗಳು 'Bhāsa's Plays—A Critical Study' ಎಂಬ ತಮ್ಮ ಲೇಖನದಲ್ಲಿ ಹೇಳಿದ್ದಾರೆ.

2. ಈಚೆಗೆ ೧೯೪೧ ರಲ್ಲಿ ಗೊಂಡಾಲ್‌ನಲ್ಲಿ ರಾಜವೈದ್ಯ ಜೀವರಾಮ ಕಾಳಿದಾಸಶಾಸ್ತ್ರಿ ಎಂಬುವವರು 'ಯಜ್ಞಫಲ' ಎಂಬ ಏಳು ಅಂಕದ ನಾಟಕವೊಂದನ್ನು ಪ್ರಕಟಿಸಿ ಅದೂ ಭಾಸರಚಿತವೆಂದು ತಮ್ಮ ಪೀಠಿಕೆಯಲ್ಲಿ ಹೇಳಿದ್ದಾರೆ. ರಾಮಾಯಣದ ಬಾಲಕಾಂಡದ ಕಥೆಯೇ ಈ ನಾಟಕದ ವಸ್ತು. ನಾಟಕದ ಯಾವ ಭಾಗದಲ್ಲೂ ಕರ್ತೃವಿನ ಹೆಸರಿನ ಉಲ್ಲೇಖವಿಲ್ಲ. ಈ 'ಯಜ್ಞಫಲ'ದ ವಿಚಾರವಾಗಿ ನಾವು 'ಪಂಚರಾತ್ರ' ನಾಟಕದ ನಮ್ಮ ತೃತೀಯ ಸಂಸ್ಕರಣದ ಆಂಗ್ಲ ಪೀಠಿಕೆಯಲ್ಲಿ ವಿವರವಾಗಿ ಪ್ರಸ್ತಾಪಿಸಿದ್ದೇವೆ.

3. 'ಪ್ರಥಿತಯಶಸಾಂ ಭಾಸಸೌಮಿಲ್ಲಕವಿಪುತ್ರಾದೀನಾಂ....' — ಮಾಲವಿಕಾಗ್ನಿಮಿತ್ರದ ಪ್ರಸ್ತಾವನೆ.

4. ಸೂತ್ರಧಾರಕೃತಾರಂಭೈಃ ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೆ ಭಾಸೋ ದೇವಕುಲೈರಿವ ॥— ಹರ್ಷಚರಿತ.

5. ಭಾಸ ಮತ್ತು ಅವನ ಕೃತಿಗಳಿಗೆ ಸಂಬಂಧಿಸಿರುವ ಬೇರೆ ಬೇರೆ ಕವಿಗಳ ಉಲ್ಲೇಖಗಳಿಗೆ ಶ್ರೀ C.R. ದೇವಧರ್‌ರವರ ಭಾಸನಾಟಕಚಕ್ರದ C ಅನುಬಂಧವನ್ನು ನೋಡಿ.

| | | |
|---|---|---|
| ೬ | ಮಧ್ಯಮವ್ಯಾಯೋಗ | ಮಹಾಭಾರತ |
| ೭ | ಪಂಚರಾತ್ರ | |
| ೮ | ದೂತವಾಕ್ಯ | |
| ೯ | ದೂತಘಟೋತ್ಕಚ | |
| ೧೦ | ಕರ್ಣಭಾರ | |
| ೧೧ | ಊರುಭಂಗ | |
| ೧೨ | ಬಾಲಚರಿತ | ಭಾಗವತ (ಕೃಷ್ಣಚರಿತೆ) |
| ೧೩ | ಚಾರುದತ್ತ (ಅಸಮಗ್ರ) | ಸ್ವತಂತ್ರ |

ಈ ಹದಿಮೂರು ನಾಟಕಗಳಲ್ಲಿ ಒಂದರಲ್ಲೂ ಕರ್ತೃವಿನ ಹೆಸರಿನ ಉಲ್ಲೇಖವೇ ಇರಲಿಲ್ಲ. ಆದರೂ ಶ್ರೀ ಗಣಪತಿಶಾಸ್ತ್ರಿಗಳು ಕೆಲವು ಕಾರಣಗಳನ್ನು ಮುಂದಿಟ್ಟು

i) ಈ ಹದಿಮೂರು ನಾಟಕಗಳೂ ಏಕಕರ್ತೃಕ ಮತ್ತು

ii) ಅವುಗಳನ್ನು ರಚಿಸಿದವನೇ (ಕಾಳಿದಾಸ, ಬಾಣ ಮೊದಲಾದವರು ಕೊಂಡಾಡಿರುವ) ಭಾಸ ಮಹಾಕವಿ

ಎಂಬ ತಮ್ಮ ಅಭಿಪ್ರಾಯವನ್ನು ಪ್ರಚುರಪಡಿಸಿದರು. ಅವರು ಮುಂದಿಟ್ಟ ಕಾರಣಗಳು ಈ ರೀತಿ ಇವೆ—

### i . ಈ ಹದಿಮೂರು ನಾಟಕಗಳೂ ಏಕಕರ್ತೃಕ

ಈ ನಾಟಕಗಳೆಲ್ಲವನ್ನೂ ಪರಿಶೀಲಿಸಿದರೆ ಅವುಗಳಲ್ಲಿ ಬಹುಮುಖವಾದ ಸಾಮ್ಯಗಳು ಕಂಡುಬರುತ್ತವೆ.

೧ ಈ ಎಲ್ಲ ನಾಟಕಗಳೂ 'ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ' ಎಂದು ಆರಂಭವಾಗುತ್ತವೆ. ಆ ಮೇಲೆ ಸೂತ್ರಧಾರ ಪ್ರಾರ್ಥನಾ ಶ್ಲೋಕ (ನಾಂದೀ ?) ಹೇಳಿ ಪ್ರಸ್ತಾವನೆ ಆರಂಭಿಸುತ್ತಾನೆ. ಕಾಳಿದಾಸಾದಿ ಕವಿಗಳ ನಾಟಕಗಳಲ್ಲಿ ಹೀಗಿಲ್ಲ. ಮೊದಲು ನಾಂದೀ ಶ್ಲೋಕವೂ ಆಮೇಲೆ 'ತತಃ ಪ್ರವಿಶತಿ ಸೂತ್ರಧಾರಃ' ಎಂಬ ರಂಗಸೂಚನೆಯೂ ಬರುತ್ತದೆ.

೨ ಪ್ರಸ್ತಾವನೆಗಳಲ್ಲಿ ನಾಟಕದ ಹೆಸರು, ಕವಿ ಮತ್ತು ಅವನ ಆಶ್ರಯದಾತನ ಹೆಸರು ಇತ್ಯಾದಿಗಳನ್ನು ಹೇಳುವುದು ಸಂಪ್ರದಾಯ. ಆದರೆ ಈ ನಾಟಕಗಳಲ್ಲಿ ಇವೊಂದೂ ಉಕ್ತವಾಗಿಲ್ಲ.

೩ 'ಪ್ರಸ್ತಾವನೆ' ಎಂಬ ಹೆಸರಿಗೆ ಬದಲಾಗಿ 'ಸ್ಥಾಪನೆ'[6] ಎಂಬ ಹೆಸರನ್ನು ಈ ಎಲ್ಲ ನಾಟಕಗಳಲ್ಲೂ ಬಳಸಲಾಗಿದೆ.

೪ ಈ ನಾಟಕಗಳ ಭರತವಾಕ್ಯಗಳು[7] ಸ್ವಲ್ಪ ಹೆಚ್ಚು ಕಡಿಮೆ ಒಂದೇ.

೫ ಭಾಷೆ ಮತ್ತು ಶೈಲಿ ಈ ಎಲ್ಲ ನಾಟಕಗಳಲ್ಲೂ ಒಂದೇ ರೀತಿ ಇವೆ.

೬ 'ಪತಾಕಾಸ್ಥಾನ'ವೂ ನಾಂದೀ ಶ್ಲೋಕದಲ್ಲಿ[8] ಮುದ್ರಾಲಂಕಾರವೂ ಈ ನಾಟಕಗಳಲ್ಲಿ ಬಹುತರವಾಗಿ ಪ್ರಯೋಗಿಸಲ್ಪಟ್ಟಿವೆ.

೭ ಒಂದೇ ಹೆಸರಿನ ನೀಚಪಾತ್ರಗಳೂ, ಒಂದೇ ಬಗೆಯ ಅಪಾಣಿನೀಯ ಶಬ್ದ ಪ್ರಯೋಗಗಳೂ, ಒಂದೇ ಬಗೆಯ ಭಾವಗಳೂ ಈ ನಾಟಕಗಳಲ್ಲಿ ಪುನಃ ಪುನಃ ಬಳಸಲ್ಪಟ್ಟಿರುತ್ತವಲ್ಲದೆ, ಒಂದು ನಾಟಕದಲ್ಲಿ ಬಂದ[9] ವಾಕ್ಯ ಅಥವಾ ಪದಸಮೂಹ ಮತ್ತು ಶ್ಲೋಕ ಅಥವಾ ಶ್ಲೋಕಭಾಗಗಳು ಉಳಿದ ನಾಟಕ ಗಳಲ್ಲೂ ಪದೇ ಪದೇ ಪ್ರಯೋಗಿಸಲ್ಪಟ್ಟಿವೆ.

---

6. ಕರ್ಣಭಾರದಲ್ಲಿ ಮಾತ್ರ 'ಪ್ರಸ್ತಾವನಾ' ಎಂದೇ ಪ್ರಯೋಗಿಸಲ್ಪಟ್ಟಿದೆ. ಪ್ರತಿಜ್ಞಾ ಯೌಗಂಧರಾಯಣದಲ್ಲಿ 'ಆಮುಖಂ' ಎಂಬ ಪಾಠಾಂತರವಿದೆ. ಬಾಲಚರಿತದಲ್ಲಿ ಈ ಯಾವ ಹೆಸರೂ ಇಲ್ಲ; ಆದರೆ ದೇವಧರ್‌ರವರು ಮಾತ್ರ 'ಸ್ಥಾಪನಾ' ಎಂಬ ಹೆಸರನ್ನು ಸೇರಿಸಿಯೇ ಬಿಟ್ಟಿದ್ದಾರೆ. ಪ್ರೊ. ಪರಂಜಪೆಯವರು ಮಧ್ಯಮವ್ಯಾಯೋಗದಲ್ಲಿ 'ಸ್ಥಾಪನಾ' ಎಂಬ ಪದಕ್ಕೆ ಬರೆದಿರುವ ಟಿಪ್ಪಣಿಯನ್ನೂ ಗಣಪತಿಶಾಸ್ತ್ರಿಗಳ Critical Study ಪುಟ ೧೦ ನ್ನೂ ನೋಡಿ.

7. ಸ್ವಪ್ನ, ಬಾಲಚರಿತ, ದೂತವಾಕ್ಯಗಳಲ್ಲಿ ಬರುವ ಭರತವಾಕ್ಯ—"ಇಮಾಂ ಸಾಗರ ಪರ್ಯಂತಾಂ ಹಿಮವದ್ವಿಂಧ್ಯಕುಂಡಲಾಂ | ಮಹೀಮೇಕಾತಪತ್ರಾಂಕಾಂ ರಾಜಸಿಂಹಃ ಪ್ರಶಾಸ್ತು ನಃ ||" ಪ್ರತಿಜ್ಞಾ, ಅವಿಮಾರಕ, ಅಭಿಷೇಕಗಳಲ್ಲಿ—"ಭವಂತ್ವರಜಸೋ ಗಾವಃ ಪರಚಕ್ರಂ ಪ್ರಶಾಮ್ಯತು | ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ ಪ್ರಶಾಸ್ತು ನಃ ||" ಪಂಚರಾತ್ರದಲ್ಲಿ ಇದರ ಉತ್ತರಾರ್ಧ ಮಾತ್ರ ಬರುತ್ತದೆ. ಈ ಏಳು ನಾಟಕಗಳ ಭರತವಾಕ್ಯಗಳಲ್ಲಿ ಮಾತ್ರ 'ರಾಜಸಿಂಹಃ ಪ್ರಶಾಸ್ತು ನಃ' ಎಂಬ ವಾಕ್ಯ ಇವೆ. ಪ್ರತಿಮಾ ಮತ್ತು ಕರ್ಣಭಾರಗಳಲ್ಲಿ 'ರಾಜಾ ಭೂಮಿಂ ಪ್ರಶಾಸ್ತು ನಃ' ಎಂದು ಮಾತ್ರ ಇವೆ. ಪಂಚರಾತ್ರ ವಿನಾ ಉಳಿದ ನಾಟಕಗಳಲ್ಲಿ ಶ್ಲೋಕದ ಹಿಂದೆ 'ಭರತವಾಕ್ಯಂ' ಎಂಬ ರಂಗಸೂಚನೆ ಇವೆ. ಚಾರುದತ್ತ, ದೂತಘಟೋತ್ಕಚಗಳಲ್ಲಿ ಭರತವಾಕ್ಯವೇ ಇಲ್ಲ. ಮಧ್ಯಮವ್ಯಾಯೋಗದ ಭರತವಾಕ್ಯದಲ್ಲಿ 'ಉಪೇಂದ್ರ' ಎಂಬ ಹೆಸರು ಬರುತ್ತದೆ. ಊರುಭಂಗದಲ್ಲಿ ಬರುವುದು ಸೀಳು ಪದ್ಯ.

8. ಪಂಚರಾತ್ರ, ಪ್ರತಿಜ್ಞಾ, ಸ್ವಪ್ನ ಮತ್ತು ಪ್ರತಿಮಾನಾಟಕ ನೋಡಿ.

9. C.R. ದೇವಧರ್‌ರವರ 'Plays ascribed to Bhāsa, their authenticity & merits' ನೋಡಿ; ಇಂತಹ ಪ್ರಯೋಗಗಳ ಪಟ್ಟಿಯೊಂದನ್ನು ಕೊಟ್ಟಿದ್ದಾರೆ.

೮ ಈ ನಾಟಕಗಳಲ್ಲಿ ಬರುವ ಕೆಲವು ಸನ್ನಿವೇಶಗಳು ಭರತನ ನಾಟ್ಯಶಾಸ್ತ್ರ ನಿಯಮಗಳಿಗನುಗುಣವಾಗಿಲ್ಲ. ಮರಣ ಮತ್ತು ಯುದ್ಧಗಳೂ ನೀರನ್ನು ತರಿಸಿ ಆಚಮನಾದಿ ಮಾಡುವುದೂ ರಂಗಸ್ಥಳದ ಮೇಲೆಯೇ ಪ್ರದರ್ಶಿತ ವಾಗುತ್ತವೆ.

೯ ಎಷ್ಟೋಕಡೆ ರಂಗಸೂಚನೆಗಳು ಸಾಕಷ್ಟು ಇರುವುದೇ [10]ಇಲ್ಲ. ತುಂಬ ತ್ವರೆಯನ್ನು ಸೂಚಿಸುವಂತಹ 'ನಿಷ್ಕ್ರಮ್ಯ, ಪ್ರವಿಶ್ಯ' ಎಂಬ ರಂಗ ಸೂಚನೆ ಪ್ರಾಯಃ ಈ ಎಲ್ಲ ನಾಟಕಗಳಲ್ಲೂ ವಿಶೇಷವಾಗಿದೆ.

೧೦ ನಾಟಕದ ಹೆಸರು ಆಯಾ ನಾಟಕದ ಸಮಾಪ್ತಿವಾಕ್ಯದಲ್ಲಿ ಮಾತ್ರಬರುತ್ತದೆ.

ಇಷ್ಟು [11]ಬಗೆಯ ಸಾಮ್ಯಗಳು ಈ ಹದಿಮೂರು ನಾಟಕಗಳಲ್ಲೂ ಇರುವುದರಿಂದ ಈ ಎಲ್ಲ ನಾಟಕಗಳೂ ಒಬ್ಬ ಕವಿಯಿಂದಲೇ ರಚಿತವಾದುವೆಂಬುದು ಯಾರಿಗೇ[12] ಆಗಲಿ ತೋರುವುದು ಸಹಜ

---

10. ಉದಾಹರಣೆಗೆ ಪ್ರತಿಜ್ಞಾ II [51] ರಲ್ಲಿ 'ಪ್ರಣಿಪತ್ಯ' ಎಂಬ ರಂಗಸೂಚನೆ ಇರ ಬೇಕು. ಇಲ್ಲದಿದ್ದರೆ ಮುಂದೆ II [56] ರಲ್ಲಿ 'ಉತ್ತಿಷ್ಠೋತ್ತಿಷ್ಠ' ಎಂಬ ಮಾತಿಗೆ ಔಚಿತ್ಯವೇ ಇಲ್ಲವೆ ಹೋಗುತ್ತದೆ. ಪಂಚರಾತ್ರ ಪುಟ ೯ ರಲ್ಲಿ ಅನೇಕ ರಾಜರು ದುರ್ಯೋಧನ ನಿಗೆ ತಮ್ಮ ಮರ್ಯಾದೆ ಸಲ್ಲಿಸುವ ಸನ್ನಿವೇಶ ಬರುತ್ತವೆ. ಆದರೆ ಅವರು ಅಲ್ಲಿಗೆ ಬಂದ ರಂಗಸೂಚನೆ ಇಲ್ಲವೇ ಇಲ್ಲ.

11. ಇನ್ನೂ ಕೆಲವು ಸಾಮ್ಯಗಳನ್ನೂ ಗಮನಿಸಿ—

೧. ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ಈ ಎರಡು ನಾಟಕಗಳೂ ಒಂದೇ ಕಥೆಯ ಎರಡು ಭಾಗಗಳು. ೨. ಪಂಚರಾತ್ರ, ಮಧ್ಯಮವ್ಯಾಯೋಗ ಎರಡರಲ್ಲೂ ಭೀಮ 'ಮಧ್ಯಮ'ನೆಂದು ಉಕ್ತನಾಗಿದ್ದಾನೆ. ಎರಡರಲ್ಲೂ ಭೀಮ ತನ್ನ ತೋಳುಗಳೇ ತನ್ನ ಆಯುಧವೆಂದು ಹೇಳಿಕೊಂಡಿದ್ದಾನೆ. ೩. 'ಯವನಿಕಾ' ಎಂಬ ಪದ 'ತೆರೆ' ಎಂಬ ಅರ್ಥದಲ್ಲಿ ಪ್ರತಿಮಾನಾಟಕದ ಎರಡನೇ ಅಂಕದ ಕೊನೆಯಲ್ಲೂ, ಸ್ವಪ್ನವಾಸವದತ್ತ, ಊರುಭಂಗಗಳ ಕೊನೆಯ ಭಾಗಗಳಲ್ಲೂ, ಅವಿಮಾರಕದಲ್ಲಿ ವೇಷವರ್ಣನೆ ಮಾಡುವಾಗಲೂ ಪ್ರಯೋಗಿಸಲ್ಪಟ್ಟಿದೆ. ೪. ಚಾರುದತ್ತ i, ಅವಿಮಾರಕ iii, ಬಾಲಚರಿತಗಳಲ್ಲಿ ಬರುವ ಕತ್ತಲೆಯ ವರ್ಣನೆ ಒಂದೇ ರೀತಿ ಇದೆ. ಪ್ರಾಯಃ ಈ ಎಲ್ಲ ನಾಟಕಗಳಲ್ಲೂ 'ಆಕಾಶಭಾಷಿತ' ವಿಶೇಷವಾಗಿ ಬರುತ್ತದೆ. ೫. ಪಂಚರಾತ್ರದಲ್ಲಿ ಯಾಗವರ್ಣನೆಯನ್ನು ಮೂವರು ಬ್ರಾಹ್ಮಣರೂ, ಅಭಿಷೇಕನಾಟಕದಲ್ಲಿ ರಾಮರಾವಣರ ಯುದ್ಧವನ್ನು ಮೂವರೇ ವಿದ್ಯಾಧರರೂ, ಊರುಭಂಗದಲ್ಲಿ ಗದಾಯುದ್ಧವನ್ನು ಮೂವರೇ ಭಟರುಗಳೂ ವರ್ಣಿಸುತ್ತಾರೆ.

12. ಪ್ರೊ. ಡೇ ಅವರು ಇದನ್ನು ಒಪ್ಪುವುದಿಲ್ಲ. I. H. Q. xvii ಪುಟ 415 ನೋಡಿ. ಪ್ರೊ. ಜಾಗೀರ್ದಾರರೂ ಹಾಗೆಯೇ. ಅವರ Drama in Sanskrit Literature ಪುಟ 74 ನೋಡಿ.

## ii ಭಾಸನೇ ಈ ೧೩ ನಾಟಕಗಳನ್ನು ರಚಿಸಿಧವನು

a) ೧. ಈ ಹದಿಮೂರು ನಾಟಕಗಳೂ ಏಕಕರ್ತೃಕಗಳೆಂದ ಮೇಲೆ ಇವುಗಳಲ್ಲಿ ಯಾವುದಾದರೂ ಒಂದನ್ನು ರಚಿಸಿದ ಕವಿ ಇಂಥವನೆಂಬುವುದು ಇತ್ಯರ್ಥವಾದರೆ, ಅವನೇ ಮಿಕ್ಕ ನಾಟಕಗಳನ್ನೂ ಬರೆದವನೆಂದು ಹೇಳಿದಂತೆಯೇ. ಆದ್ದರಿಂದ, ಇದೇ ದೃಷ್ಟಿಯಿಂದ ಪರಿಶೀಲಿಸಿದರೆ ರಾಜಶೇಖರನು (ಸುಮಾರು ೧೦ ನೇ ಶತಮಾನ) ಸೂಕ್ತಿಮುಕ್ತಾವಳಿಯಲ್ಲಿ ಭಾಸ ಮತ್ತು ಅವನ ಕೃತಿಯಾದ ಸ್ವಪ್ನವಾಸವದತ್ತ ಈ ಎರಡು ಹೆಸರುಗಳನ್ನೂ ಒಟ್ಟಿಗೇ ಪ್ರಯೋಗಮಾಡಿರುವ ಈ ಶ್ಲೋಕ ತುಂಬ ಉಪಕಾರಕವಾಗುತ್ತದೆ.

ಭಾಸನಾಟಕಚಕ್ರೇಽಪಿ ಚ್ಛೇಕೈಃ ಕ್ಷಿಪ್ತೇ ಪರೀಕ್ಷಿತುಂ |
ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನ ಪಾವಕಃ[13] ||

ಸಂಸ್ಕೃತ ಸಾಹಿತ್ಯದಲ್ಲಿ ಒಬ್ಬನೇ ಕವಿಯಿಂದ ರಚಿತವಾದ ನಾಟಕಚಕ್ರವೆಂದರೆ ಈ ಹದಿಮೂರು ನಾಟಕಗಳನ್ನು ಬಿಟ್ಟರೆ ಬೇರೆ ಇಲ್ಲ. ಅಂತಹ ನಾಟಕ ಚಕ್ರದಲ್ಲೇ ಸೇರಿರುವುದಾಗಿ ಹೇಳಿರುವ ಸ್ವಪ್ನವಾಸವದತ್ತವೂ ಈ ೧೩ ರಲ್ಲಿ ಒಂದು. ಆದ್ದರಿಂದ ಅದರ ಕರ್ತೃ ಭಾಸನೇ ಎಂದು ಧಾರಾಳವಾಗಿ ಹೇಳಬಹುದಲ್ಲದೆ, ಇದೇ ಆಧಾರದ ಮೇಲೆ, ಏಕಕರ್ತೃಕವೆಂದು ಸಿದ್ಧವಾಗಿರುವ ಈ ೧೩ ನಾಟಕಗಳನ್ನು ರಚಿಸಿದವನೂ ಭಾಸನೇ ಎಂದು ತೀರ್ಮಾನಿಸಬಹುದು.

೨. ಇದಲ್ಲದೆ, ಬಾಣಮಹಾಕವಿಯು (ಕ್ರಿ.ಶ. ೬೨೦) ಹರ್ಷಚರಿತೆಯಲ್ಲಿ ಭಾಸನ ನಾಟಕಗಳ ಸ್ಥೂಲಸ್ವರೂಪವನ್ನು ಒಂದು ಶ್ಲೋಕದಲ್ಲಿ ಹೇಳಿದ್ದಾನೆ.

---

13. 'ಭಾಸನ ನಾಟಕಚಕ್ರವನ್ನು ಪರೀಕ್ಷೆಮಾಡಲು ಆ ನಾಟಕಗಳನ್ನು ಬೆಂಕಿಯಲ್ಲಿ ಹಾಕಿದಾಗ, ಬೆಂಕಿಯು ಸ್ವಪ್ನವಾಸವದತ್ತವನ್ನು ಸುಡಲಿಲ್ಲ'— ಇದೇ ಕಾರಣದಿಂದ ಭಾಸನಿಗೆ 'ಜ್ವಲನಮಿತ್ರ' ಎಂಬ ಹೆಸರು ಬಂದಿತ್ತೆಂದು ತೋರುತ್ತದೆ. ವಾಕ್ಪತಿರಾಜನು (ಕ್ರಿ.ಶ. ೮ ನೇ ಶತಮಾನ) ತನ್ನ (ಪ್ರಾಕೃತ ಗ್ರಂಥ) ಗೌಡವಹೋ ಶ್ಲೋಕ ೮೦೯ ರಲ್ಲಿ ಭಾಸನನ್ನು 'ಜಲಣಮಿತ್ತ' ಎಂದು ನಿರ್ದೇಶಿಸಿದ್ದಾನೆ. ಸ್ವಪ್ನನಾಟಕದ ಆದಿಯಲ್ಲಿ 'ಲಾವಾಣಕ ವಹ್ನಿ' ವೃತ್ತಾಂತದ, ಪಂಚರಾತ್ರದ ಆದಿಯಲ್ಲಿ ವಟುಗಳ ಚೇಷ್ಟೆಯಿಂದೆದ್ದ ದಾವಾಗ್ನಿಯ, ವರ್ಣನೆ ಇದೆ; ಆದರೆ ಎರಡು ಕಡೆಯಲ್ಲೂ ಏನೊಂದೂ ಹಾನಿ ಸಂಭವಿಸದ ಅಗ್ನಿ. ಹೀಗೆಯೇ 'ಅಭಿಷೇಕ'ದಲ್ಲಿ ಸೀತೆಯ ಮತ್ತು 'ಅವಿಮಾರಕ'ದಲ್ಲಿ ಕಥಾನಾಯಕನ ಅಗ್ನಿಪ್ರವೇಶ; ಅಲ್ಲೂ ಅಪಾಯವೇನೂ ಸಂಭವಿಸದ ಅಗ್ನಿ. ಇವನ್ನೆಲ್ಲಾ ನೋಡಿದರೆ ಭಾಸ ಅಗ್ನಿಪ್ರಿಯ, ಜಲಣಮಿತ್ತ ಎಂದು ಹೇಳಬಹುದೆಂದು ತೋರುತ್ತದೆ.

[14] ಸೂತ್ರಧಾರಕೃತಾರಂಭೈರ್ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥

ಈ ಶ್ಲೋಕದಲ್ಲಿ ಹೇಳಿರುವ ಮೂರು ಲಕ್ಷಣಗಳೂ ಈ ೧೩ ನಾಟಕಗಳಲ್ಲಿ ಪರಿಪೂರ್ಣವಾಗಿವೆ. ಈ ಕಾರಣದಿಂದಲೂ ಇವು ಭಾಸನಿಂದಲೇ ರಚಿತವಾದುವು.

b) ಈಗ ಈ ಭಾಸ ಯಾರು? ಕಾಳಿದಾಸನು ತನ್ನ ಮಾಲವಿಕಾಗ್ನಿಮಿತ್ರದಲ್ಲಿ ಪ್ರಶಂಸಿಸಿರುವ (ಅವನಿಗಿಂತ) ಪ್ರಾಚೀನನಾದ ಕವಿಯೇ? ಅಥವಾ ಅರ್ವಾಚೀನನೇ? ಎಂಬ ಪ್ರಶ್ನೆ ಏಳುತ್ತದೆ.

೧ ಈ ನಾಟಕಗಳಲ್ಲಿ ಬರುವ [15]ಅಪಾಣಿನೀಯ ಪ್ರಯೋಗಗಳನ್ನೂ ಭರತನ ನಾಟ್ಯಶಾಸ್ತ್ರನಿಯಮಗಳು ಅನ್ವಯಿಸದ[16] ಸನ್ನಿವೇಶಗಳನ್ನೂ ಗಮನಿಸಿದರೆ ಭಾಸನು [17]ಪಾಣಿನಿ, ಭರತ ಇವರಿಗಿಂತ ಪ್ರಾಚೀನನಾಗಿಯೇ ಇರಬೇಕು.

೨ ಭಾಸನಲ್ಲಿ ವ್ಯಾಸ ವಾಲ್ಮೀಕಿಗಳು ಪ್ರಯೋಗಿಸಿರುವಂತಹ ಆರ್ಷ ಶಬ್ದ ಪ್ರಯೋಗಗಳು ಹೆಚ್ಚು; ಶ್ಲೋಕಗಳಲ್ಲಿ ಪಾದಪೂರಣಗಳಾದ ಚ, ತು, ಹಿ ಅಲ್ಲಲ್ಲೇ ಇವೆ; ಅನುಷ್ಟುಪ್ ಶ್ಲೋಕ ವಿಶೇಷವಾಗಿ ಬಳಸಲ್ಪಟ್ಟಿದೆ; ಇತ್ತೀಚಿನ ಕಾವ್ಯಗಳಂತೆ ಅಲಂಕಾರಗಳನ್ನು ಅಧಿಕವಾಗಿ ಬಳಸಿಲ್ಲ;—ಈ ಅಂಶಗಳನ್ನು ನೋಡಿದರೆ ಈ ಕವಿ ವ್ಯಾಸವಾಲ್ಮೀಕಿಗಳ ಸಮಕಾಲೀನನಲ್ಲದಿದ್ದರೂ ಅವನಿಗಿಂತ ತುಂಬ ದೂರದವನಲ್ಲವೆಂದು ಹೇಳಬೇಕಾಗುತ್ತದೆ.

೩ ಜೋನರಾಜನು ಜಯಾಂಕನ (೧೨ ನೇ ಶತಮಾನ) ಪೃಥ್ವೀರಾಜವಿಜಯದ ಒಂದು [18]ಶ್ಲೋಕದ ವ್ಯಾಖ್ಯಾನಮಾಡುತ್ತಾ 'ಸೋಗ್ನಿರಪಿ ಭಾಸಮುನೇಃ

---

14. ಸೂತ್ರಧಾರನಿಂದಲೇ ಪ್ರಾರಂಭಿಸಲ್ಪಟ್ಟು, ಬಹುಭೂಮಿಕೆಗಳಿಂದಲೂ ಪತಾಕಸ್ಥಾನಗಳಿಂದಲೂ ಕೂಡಿರುವ ನಾಟಕಗಳ ಮೂಲಕ ಭಾಸನು, ಸೂತ್ರಧಾರನಾದ ಶಿಲ್ಪಿಯಿಂದ ಪ್ರಾರಂಭಿಸಲ್ಪಟ್ಟು ಅನೇಕ ಭೂಮಿಕೆಗಳಿಂದಲೂ ಧ್ವಜಗಳಿಂದಲೂ ಕೂಡಿದ ದೇವಾಲಯಗಳಂತೆ, (ಶಾಶ್ವತವಾದ) ಕೀರ್ತಿಯನ್ನು ಗಳಿಸಿದನು.

15. ಪ್ರಕೃತನಾಟಕದಲ್ಲಿ ಬರುವ ಅಪಾಣಿನೀಯ ಪ್ರಯೋಗಗಳ ಪಟ್ಟಿಯನ್ನು ಕೊನೆಯಲ್ಲಿ ಕೊಟ್ಟಿದೆ.

16. ಈ ನಾಟಕಗಳ ಏಕಕರ್ತೃಕತ್ವ ವಿಚಾರದಲ್ಲಿ ಕೊಡಲಾಗಿರುವ ೮ನೇ ಕಾರಣ (ಪುಟ 8) ನೋಡಿ.

17. ಭಾಸ ಪಾಣಿನಿಗಿಂತ ಪ್ರಾಚೀನನೆಂಬ ಗಣಪತಿಶಾಸ್ತ್ರಿಗಳ ಮತವನ್ನು ಅವರ ಪಕ್ಷದವರೇ ಕೆಲವರು ಅನುಮೋದಿಸುವುದಿಲ್ಲ.

18. ಸತ್ಕಾವ್ಯಸಂಹಾರವಿಧೌ ಖಲಾನಾಂ ದೀಪ್ತಾನಿ ವಹ್ನೇರಪಿ ಮಾನಸಾನಿ ।
ಭಾಸಸ್ಯ ಕಾವ್ಯಂ ಖಲು ವಿಷ್ಣುಧರ್ಮಾನ್(?)ಸೋಽಪ್ಯಾನನಾತ್ಪಾರತವನ್ನಮೋಚ ॥

ಕಾವ್ಯಂ.......' ಎಂದು ಹೇಳಿ ಭಾಸನನ್ನು ಮುನಿ ಎಂದಿರುವುದು ಪ್ರಾಯಃ ಭಾಸನ ಪ್ರಾಚೀನತೆಗೆ ಉಪಷ್ಟಂಭಕವಾಗಿದೆಯೆನ್ನಬಹುದು.

೪ ಈ ೧೩ ನಾಟಕಗಳಲ್ಲಿ ಬರುವ ಭಾವಗಳೂ ಸನ್ನಿವೇಶಗಳೂ [19]ಕಾಳಿದಾಸ, [20]ಅಶ್ವಘೋಷ, [21]ಶೂದ್ರಕ, [22]ವಿಶಾಖದತ್ತ ಮುಂತಾದವರ ಕೃತಿಗಳಲ್ಲಿ ರೂಪಾಂತರಗೊಂಡು ಕಾಣಬರುತ್ತವಾದ್ದರಿಂದ ಈ ನಾಟಕಗಳನ್ನು ರಚಿಸಿದ ಭಾಸನು ಕಾಳಿದಾಸಾದಿಗಳಿಗಿಂತ ಪ್ರಾಚೀನನಾದವನೇ ಇರಬೇಕು.

## iii ಈ ನಾಟಕ ಚಕ್ರ ರಚಿಸಿದವನು ಭಾಸನೆ, ಅಲ್ಲವೆ ಎಂಬ ವಿವಾದ

a) ಈ ಹದಿಮೂರು ನಾಟಕಗಳೂ ಏಕಕರ್ತೃಕ

b) ಈ ನಾಟಕಗಳನ್ನು ಬರೆದವನು 'ಭಾಸ' ನೇ

ಎಂಬ ಈ ಎರಡು ಅಭಿಪ್ರಾಯಗಳನ್ನೂ ಪಂಡಿತ ಗಣಪತಿಶಾಸ್ತ್ರಿಗಳು ಪ್ರಕಟಿಸಿದ ಮೇಲೆ, ವಿದ್ವಾಂಸರು ಈ ಬಗ್ಗೆ ವಿಚಾರ ನಡೆಸಿ, [23]'ಈ ನಾಟಕಗಳು ಏಕಕರ್ತೃಕ' ಎಂಬಂಶವನ್ನು 'ಪ್ರಾಯಃ ಎಲ್ಲರೂ ಒಪ್ಪಿಕೊಂಡರೂ 'ಅವುಗಳನ್ನು ಬರೆದವನು ಭಾಸ' ಎಂಬ ವಿಚಾರದಲ್ಲಿ ಮಾತ್ರ ಕೆಲವರು ಶ್ರೀಶಾಸ್ತ್ರಿಗಳ ಮತವನ್ನು ಅನುಮೋದಿಸಿಯೂ,[25] ಕೆಲವರು ವಿರೋಧಿಸಿಯೂ[25] ತಮ್ಮ

---

19. ಗಣಪತಿಶಾಸ್ತ್ರಿಗಳ Critical Study ಮತ್ತು ಅವರ ಸ್ವಪ್ನವಾಸವದತ್ತ ಪ್ರತಿಮಾನಾಟಕಗಳ ಪೀಠಿಕೆಯನ್ನು ನೋಡಿ.

20. ಪ್ರತಿಜ್ಞಾನಾಟಕದ I ೧೮ ನೇ ಪದ್ಯ ಅಶ್ವಘೋಷನ ಬುದ್ಧಚರಿತ XII ೬೦ ರಲ್ಲಿ ಈ ರೀತಿ ರೂಪಾಂತರ ಹೊಂದಿದೆ.

ಕಾಷ್ಠಂ ಹಿ ಮಥ್ನನ್ ಲಭತೇ ಹುತಾಶಂ ಭೂಮಿಂ ಖನನ್ ವಿಂದತಿ ಚಾಪಿ ತೋಯಂ।
ನಿರ್ಬಂಧಿನಃ ಕಿಂಚನ ನಾಸ್ತ್ಯಸಾಧ್ಯಂ ನ್ಯಾಯೇನ ಯುಕ್ತಂ ಚ ಕೃತಂ ಚ ಸರ್ವಂ॥

21. ಪುಸಲ್ಕರ್‌ರವರ 'Bhāsa—A Study' ಪುಟ ೧೫೫ ನೋಡಿ.

22. ಭಾಸನ ಪ್ರತಿಜ್ಞಾ ಓದಿಯೇ ಸ್ಫೂರ್ತಿಹೊಂದಿ ವಿಶಾಖದತ್ತನು ಮುದ್ರಾರಾಕ್ಷಸ ರಚಿಸಿರಬೇಕು. ನಮ್ಮ ಮುದ್ರಾರಾಕ್ಷಸದ ಆಂಗ್ಲ ಪೀಠಿಕೆಯನ್ನು ನೋಡಿ.

23. ಈ ಬಗ್ಗೆ ನಡೆದಿರುವ ವಿಚಾರಗಳ ಲೇಖನಸೂಚಿಗೆ ಪುಸಲ್ಕರ್‌ರವರ Bhāsa—A Study ಯ Appendix I ನೋಡಿ. 24. ಮೇಲೆ ಟಿಪ್ಪಣಿ ೧೨ ನೋಡಿ.

25. ಕೀತ್, ಥಾಮಸ್, ಪರಂಜಪೆ ಮುಂತಾದವರು ಶಾಸ್ತ್ರಿಗಳ ಮತವನ್ನೇ ಸಮರ್ಥಿಸಿದರು; ಕಾಣೆ, ಬಾರ್ನೆಟ್, ರಾಮಪಿಷರೋಟಿ, ಕೃಷ್ಣಪಿಷರೋಟಿಗಳು ವಿರೋಧಿಸಿ ಖಂಡಿಸಿದರು; ಸುಬ್ಥಂಕರ್, ವಿಂಟರ್‌ನಿಟ್ಸ್ ಮುಂತಾದವರು ಮಧ್ಯಮಮಾರ್ಗ ಹಿಡಿದು ಈಗ ದೊರೆತಿರುವ ಕಾರಣಗಳು ನಿರ್ಣಯಕ್ಕೆ ಸಾಲದೆಂದು ಅಭಿಪ್ರಾಯಪಟ್ಟರು.

ತಮ್ಮ ಸಂಶೋಧನೆಗಳನ್ನು ಪ್ರಕಟಿಸಿದರು. ಹೀಗಾಗಿ ಇದೊಂದು ವಾದ-ವಿವಾದದಲ್ಲಿ ಪರಿಣಮಿಸಿ ಈ ಬಗ್ಗೆ ಮೂರು[25] ವಿಧವಾದ ಅಭಿಪ್ರಾಯ ಹುಟ್ಟಿತು—

೧. ಈ ಹದಿಮೂರು ನಾಟಕಗಳೂ ಭಾಸರಚಿತವಾದುವು.

೨. ಇವುಗಳಲ್ಲೊಂದೂ ಭಾಸರಚಿತವಲ್ಲ.

೩. ಇವು ಭಾಸರಚಿತ ನಾಟಕಗಳೆನ್ನಲು ಸಾಕಷ್ಟು ಆಧಾರಗಳು ಇನ್ನೂ ದೊರೆತಿಲ್ಲವಾದ್ದರಿಂದ, ಇವುಗಳನ್ನು ರಚಿಸಿದವನು ಇಂತಹವನೇ ಎಂದು ಈಗಲೇ ಹೇಳಲಾಗುವದಿಲ್ಲ.

ಈ ನಾಟಕಗಳು ಭಾಸರಚಿತವಲ್ಲವೇ ಅಲ್ಲ, ಎಂದು ವಾದಮಾಡುವವರು ಹೇಳುವ ಕಾರಣಗಳು ಇವು—

೧ ಬಾಣನು 'ಸೂತ್ರಧಾರಕೃತಾರಂಭೈಃ....' ಶ್ಲೋಕದಲ್ಲಿ ಹೇಳಿರುವ ಲಕ್ಷಣಗಳು ದಕ್ಷಿಣದೇಶದಲ್ಲಿ ರಚಿತವಾಗಿರುವ ಇನ್ನೂ ಅನೇಕ[26] ನಾಟಕಗಳಲ್ಲಿ ಕಂಡುಬರುತ್ತವೆಯಾಗಿ, ಅವು ನಿರ್ಣಾಯಕವಾಗಲಾರವು.

೨ ರಾಮಚಂದ್ರಕೃತ ನಾಟ್ಯದರ್ಪಣದಲ್ಲಿ ಭಾಸನ ಸ್ವಪ್ನವಾಸವದತ್ತದಿಂದ ಕೆಲವು ವಾಕ್ಯಗಳು ಉದ್ಧೃತವಾಗಿವೆ. ಅಲ್ಲಿ ವತ್ಸರಾಜನು ಶೇಫಾಲಿಕಾ ಮಂಟಪದ ಶಿಲಾತಲವನ್ನು ನೋಡಿ ಹೇಳುವ

[27] ಪಾದಾಕ್ರಾಂತಾನಿ ಪುಷ್ಪಾಣಿ ಸೋಷ್ಮ ಚೇದಂ ಶಿಲಾತಲಂ ।
ನೂನಂ ಕಾಚಿದಿಹಾಸೀನಾ ಮಾಂ ದೃಷ್ಟ್ವಾ ಸಹಸಾ ಗತಾ ॥

ಎಂಬ ಶ್ಲೋಕವೂ ಒಂದು. ಈಗ ಸಿಕ್ಕಿರುವ ನಾಟಕದಲ್ಲಿ ಶೇಫಾಲಿಕಾ ಮಂಟಪದ ಪ್ರಸ್ತಾಪವಿದೆ; ಈ ಶ್ಲೋಕವಿಲ್ಲ. ಆದ್ದರಿಂದ ಈ ಸ್ವಪ್ನವಾಸವದತ್ತ ಭಾಸಕೃತ ನಾಟಕವಲ್ಲ. ಅದು ಅನ್ಯಕೃತವಾಗಿರಬೇಕು. ಈ ಸ್ವಪ್ನವಾಸವ

26. ಶಕ್ತಿಭದ್ರನ ಆಶ್ಚರ್ಯಚೂಡಾಮಣಿ, ನೀಲಕಂಠನ ಕಲ್ಯಾಣಸೌಗಂಧಿಕ, ಕುಲಶೇಖರವರ್ಮನ ತಪತೀಸ್ವಯಂವರ ಮತ್ತು ಸುಭದ್ರಾಧನಂಜಯ ಮೊದಲಾದ ಕೇರಳ ದೇಶದ ನಾಟಕಗಳನ್ನು ನೋಡಿ.

27. ಶ್ರೀ ಶಾಸ್ತ್ರಿಗಳು ಸ್ವಪ್ನವಾಸವದತ್ತದ ದ್ವಿತೀಯ ಮುದ್ರಣದಲ್ಲಿ ಈ ಶ್ಲೋಕವನ್ನು ಶೇಫಾಲಿಕಾಮಂಟಪ ಪ್ರಕರಣದಲ್ಲಿ ಸೇರಿಸಿ ಮುದ್ರಿಸಿಬಿಟ್ಟಿದ್ದಾರೆ. ಭಾವಪ್ರಕಾಶಿಕಾಕಾರರು ಸ್ವಪ್ನವಾಸವದತ್ತದ್ದೆಂದು ಉದಹರಿಸುವ 'ಚಿರಪ್ರಸುಪ್ತಃ ಕಾಮೋಽಯಂ' ಎಂದು ಆರಂಭವಾಗುವ ಶ್ಲೋಕ ಈ ಅನಂತಶಯನದ ಸ್ವಪ್ನವಾಸವದತ್ತದಲ್ಲೇ (VI ೩) ಇರುವುದು ಗಮನಾರ್ಹ.

ದತ್ತ ಭಾಸಕೃತವಲ್ಲವೆಂದ ಮೇಲೆ ಉಳಿದ ನಾಟಕಗಳೂ ಭಾಸಕೃತವಲ್ಲ.

ಈ ರೀತಿ ಬಲವಾದ ಎರಡು ಪಕ್ಷಗಳಲ್ಲಿ ಸಕಾರಣವಾದ ವಾದವಿವಾದ ಏರ್ಪಟ್ಟಿದ್ದರಿಂದ ಮಧ್ಯಮಮಾರ್ಗಾವಲಂಬಿಗಳಾದ ವಿದ್ವಾಂಸರ ಮೂರನೆಯ ಪಕ್ಷವೊಂದು ತಲೆಯೆತ್ತಿ ಯಾವುದೊಂದು ತೀರ್ಮಾನಕ್ಕೂ ಬರಲು ಸಾಕಷ್ಟು ಆಧಾರವಿಲ್ಲವೆಂಬ ಅಭಿಪ್ರಾಯಪಟ್ಟಿತು.

a) ಅಮರಕೋಶ ಟೀಕೆಯಲ್ಲಿ ಸ್ವಪ್ನವಾಸವದತ್ತದ ಹೆಸರನ್ನು ವಂದ್ಯಘಟೀಯ ಸರ್ವಾನಂದನೂ, ನಾಟ್ಯಶಾಸ್ತ್ರವ್ಯಾಖ್ಯಾನದಲ್ಲಿ ಸ್ವಪ್ನವಾಸವದತ್ತ ಮತ್ತು ದರಿದ್ರಚಾರುದತ್ತಗಳ ಹೆಸರನ್ನು ಅಭಿನವಗುಪ್ತನೂ ಹೇಳಿದ್ದಾರೆ. ಆದರೆ ಇವು ಯಾರ ಕೃತಿಗಳೆಂದು ಹೇಳಿಲ್ಲ.

b) ವಾಮನನು ಪ್ರತಿಜ್ಞಾಯೌಗಂಧರಾಯಣದಿಂದ ಒಂದು (IV ೩), (ದರಿದ್ರ) ಚಾರುದತ್ತದಿಂದ ಒಂದು (I ೩), ಸ್ವಪ್ನವಾಸವದತ್ತದಿಂದ ಒಂದು (IV ೭)—ಹೀಗೆ ಮೂರು ಶ್ಲೋಕಗಳನ್ನು ಅನುವದಿಸಿದ್ದರೂ ಆಕರವನ್ನು ಹೇಳಿಲ್ಲ.

c) ದಂಡಿಯು ಬಾಲಚರಿತದ (I ೧೫) ಮತ್ತು ಚಾರುದತ್ತದ (I ೧೯) 'ಲಿಂಪತೀವ ತಮೋಂಗಾನಿ........'ಎಂಬ ಶ್ಲೋಕವನ್ನು ಅನುವದಿಸಿದ್ದರೂ ಆಕರವನ್ನು ಹೇಳಿಲ್ಲ.

d) ಭಾಮಹನು ಪ್ರತಿಜ್ಞಾಯೌಗಂಧರಾಯಣದ ವಸ್ತುವನ್ನು ನ್ಯಾಯವಿರುದ್ಧವೆಂದು ಖಂಡಿಸಿದ್ದಾನೆ. ಆದರೆ ಅದು ಯಾವ ನಾಟಕದ್ದು; ಅದರ ಕರ್ತೃ ಯಾರು ಎಂದು ಹೇಳಿಲ್ಲ.

ಇದನ್ನೆಲ್ಲಾ ಪರಿಶೀಲಿಸಿದರೆ ಈ ನಾಟಕಗಳ ಕರ್ತೃ ಇಂತಹವನೇ ಎಂದು ಹೇಳಲಾಗುವುದಿಲ್ಲ—ಎಂಬ ವಾದವನ್ನು ಈ ಪಕ್ಷದವರು ಮುಂದಿಟ್ಟರು.

ಹೀಗಾಗಿ ಇಂದಿನವರೆಗೂ ವಿದ್ವಾಂಸರು ಯಾವ ನಿರ್ಧಾರಕ್ಕೂ ಬರಲಾಗದೆ ಈ ಮೂರು ಅಭಿಪ್ರಾಯಗಳೂ ಹಾಗೆಯೇ ಉಳಿದಿರುವುದರಿಂದ ವಾದವಿವಾದ ಬಗೆಹರಿಯದೆ, ಯಾವ ಸಿದ್ಧಾಂತವೂ ಆಗದೆ, ಈ ನಾಟಕಗಳ ಕರ್ತೃತ್ವವಿಚಾರ ಜಟಿಲವಾದ ಸಮಸ್ಯೆಯಾಗಿಯೇ ಉಳಿದಿದೆ.

ಫಲಿತಾಂಶ — ಈ ಎಲ್ಲ ವಿಚಾರಗಳಿಂದಲೂ ಕೆಲವು ಅಂಶಗಳು ಮಾತ್ರ ಸಿದ್ಧವಾಗುತ್ತವೆ. ಕಾಳಿದಾಸನಿಗಿಂತ ಹಿಂದೆ ಭಾಸನೆಂಬ ನಾಟಕ

ಕರ್ತನಿದ್ದು ಆತನು ಸ್ವಪ್ನವಾಸವದತ್ತವೆಂಬ ಉತ್ತಮರೀತಿಯ ನಾಟಕ ಬರೆದಿದ್ದನೆಂಬುದು ಕಾಳಿದಾಸನ ಮತ್ತು ರಾಜಶೇಖರನ ವಾಕ್ಯಗಳಿಂದ ಪ್ರಮಾಣಿತವಾಗಿದೆ. ಇದರಲ್ಲಿ ಸಂಶಯಕ್ಕೆ ಅವಕಾಶವಿಲ್ಲ. ಉಳಿದ ಅಂಶಗಳೆಲ್ಲಾ ಅನುಮಾನ ಪ್ರಕರಣ ಅಥವಾ ಊಹಾ ಪ್ರಪಂಚಕ್ಕೆ ಸೇರಿದುವು. ಈಗ ದೊರೆತಿರುವ ಹದಿಮೂರು ರೂಪಕಗಳೂ ಏಕಕರ್ತೃಕ ಎಂಬ ಅಂಶವೂ ನಾನಾ ಹೇತುಗಳಿಂದ ಅನುಮಿತವಾದುದ್ದು. ಈ ಏಕಕರ್ತೃಕ ರೂಪಕಗಳು ಭಾಸ ರಚಿತವೆಂಬಂಶವಂತು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲದೆ, ಬರೀ ಊಹೆಯ ಮೇಲೆಯೇ ನಿಂತಿದೆ. ಪ್ರಸ್ತಾವನೆಗಳಲ್ಲಿ ಭಾಸನೇ ರಚಿಸಿದ್ದೆಂಬ ಸ್ಪಷ್ಟೋಕ್ತಿ ರೂಪವಾದ ಅಂತಃಪ್ರಮಾಣವಿಲ್ಲದ ಮೇಲೆ ಎಷ್ಟು ವಿಚಾರಮಾಡಿದರೂ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದೇ ಇರುತ್ತದೆ. ಪ್ರಬಲವಾದ ಬಾಹ್ಯ ಪ್ರಮಾಣಗಳು ಮುಂದಾದರೂ ದೊರೆತರೆ, ಆಗ ಈ ಕರ್ತೃತ್ವದ ವಿಚಾರ ಇತ್ಯರ್ಥವಾಗಬಹುದು. ಕರ್ತೃತ್ವವಿಚಾರ ಹೇಗೆಯೇ ಇರಲಿ, ಈಗ ದೊರೆತಿರುವ ರೂಪಕಗಳೆಲ್ಲಾ ಉತ್ತಮೋತ್ತಮ ಕೃತಿಗಳೆಂದು ವಿದ್ವಾಂಸರ ಮೆಚ್ಚುಗೆ ಪಡೆದು, ಸಂಸ್ಕೃತ ಸಾಹಿತ್ಯ ಭಂಡಾರದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿವೆ.

## II ಭಾಸನ ಕಾಲ

ಕಾಳಿದಾಸ ಭಾಸನನ್ನು ತನಗಿಂತ ಪ್ರಾಚೀನನೆಂದು[28] ವಾಚ್ಯವಾಗಿಯೇ ಹೇಳಿದ್ದಾನೆ. ಬಾಣ ಅವನ[29] ಯಶಸ್ಸನ್ನು ಪ್ರಸ್ತಾಪಿಸಿದ್ದಾನೆ. ಆದ್ದರಿಂದ ಕಾಳಿದಾಸ-ಬಾಣರಿಗಿಂತ ಭಾಸ ಹಿಂದಿನವನೆಂಬುದರಲ್ಲಿ ಸಂಶಯವಿಲ್ಲ. ಭಾಸನು ತನ್ನ ಪ್ರತಿಮಾ ಮತ್ತು ಅಭಿಷೇಕ ನಾಟಕಗಳ ವಸ್ತುವನ್ನು ವಾಲ್ಮೀಕಿ ರಾಮಾಯಣದಿಂದಲೂ ದೂತವಾಕ್ಯ ಮುಂತಾದ ಏಕಾಂಕನಾಟಕಗಳ ವಸ್ತುವನ್ನು ವ್ಯಾಸನ ಮಹಾಭಾರತದಿಂದಲೂ ತೆಗೆದುಕೊಂಡಿರುವುದರಿಂದ ವ್ಯಾಸವಾಲ್ಮೀಕಿಗಳಿಗಿಂತ ಈಚಿನವನೆಂದು ಧಾರಾಳವಾಗಿ ಹೇಳಬಹುದು. ಇಷ್ಟು ಖಚಿತವಾದ

---

28. 'ಪ್ರಥಿತಯಶಸಾಂ ಭಾಸಸೌಮಿಲ್ಲಕಕವಿಪುತ್ರಾದೀನಾಂ...' — ಮಾಲವಿಕಾಗ್ನಿಮಿತ್ರದ ಪ್ರಸ್ತಾವನೆ.

29. ಸೂತ್ರಧಾರಕೃತಾರಂಭೈಃ ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥—ಹರ್ಷಚರಿತ.

ಎಲ್ಲೆಗಳು ಸಿಕ್ಕಿದ್ದರೂ ಭಾಸನ ಕಾಲ ನಿಷ್ಕೃಷ್ಟವಾಗಿ ತಿಳಿಯುವ ಹಾಗೆಯೇ ಇಲ್ಲ ಕಾಳಿದಾಸನ ಕಾಲವಿನ್ನೂ ನಿಖರವಾಗಿ ತಿಳಿದಿಲ್ಲ. ಅವನು ಕ್ರಿ.ಪೂ. ೧ ನೇ ಶತಮಾನದವನೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟರೆ, ಕ್ರಿ.ಶ. ೬ ನೇ ಶತಮಾನದವನೆಂದು ಮತ್ತೆ ಕೆಲವರು ವಾದಿಸುತ್ತಾರೆ. ವ್ಯಾಸವಾಲ್ಮೀಕಿಗಳ ಕಾಲವೂ ಹಾಗೆಯೇ. ವಾಲ್ಮೀಕಿಯ ಕಾಲ ಕೀತ್‌ರವರ ಅಭಿಪ್ರಾಯದಲ್ಲಿ ಕ್ರಿ.ಪೂ. ೪ ನೇ ಶತಮಾನವಾದರೆ, ಜಾಕೋಬಿಯವರ ಅಭಿಪ್ರಾಯದಲ್ಲಿ ಕ್ರಿ.ಪೂ. ೫ ನೇ ಶತಮಾನಕ್ಕಿಂತ ಹಿಂದಕ್ಕೆ ಹೋಗುತ್ತದೆ. ಬಾಣನ ಕಾಲ ಒಂದು ಮಾತ್ರ ಖಚಿತವಾಗಿ ಕ್ರಿ.ಶ. ೬ ನೆಯ ಶತಮಾನದ ಕೊನೆಯೆಂದು ತಿಳಿದಿದೆ. ಆದ್ದರಿಂದ ಭಾಸ ಕ್ರಿ.ಶ. ೬ ನೇ ಶತಮಾನಕ್ಕಿಂತ ಹಿಂದಿನವನೆಂದಂತಾಯಿತು. ಅಂದರೆ ಭಾಸ ಕ್ರಿ.ಪೂ. ೪ ನೇ ಶತಮಾನದಿಂದೀಚೆಗೆ ಕ್ರಿ.ಶ. ೬ ನೇ ಶತಮಾನಕ್ಕೆ ಹಿಂದೆ (೧೦೦೦ ವರ್ಷಗಳ ಕಾಲದಲ್ಲಿ) ಯಾವಾಗಲೋ ಇದ್ದಿರಬೇಕೆಂದಂತಾಯಿತು

ಪ್ರತಿಮಾನಾಟಕದಲ್ಲಿ ಬರುವ ಈ ಪ್ರಸಂಗವನ್ನು ಗಮನಿಸಿ—

V 16 ರಾಮಃ —ಭಗವನ್, ನಿವಪನಕ್ರಿಯಾಕಾಲೇ ಕೇನ ಪಿತೄಂಸ್ತರ್ಪಯಾಮಿ ?

V 19 ರಾವಣಃ—...ಓಷಧೀಷು ತಿಲಾಃ...ಮತ್ಸ್ಯೇಷು ಮಹಾಶಫರಃ,
ಪಕ್ಷಿಷು ವಾರ್ಧ್ರಾಣಸಃ, ಪಶುಷು ಗೌಃ ಖಡ್ಗೋ ವಾ—

ಇದರಿಂದ ಭಾಸನ ಕಾಲದಲ್ಲಿ ಗೋಹತ್ಯೆ ಇನ್ನೂ ನಿಂತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಕ್ರಿಸ್ತಶಕದ ಪ್ರಾರಂಭದವೇಳೆಗೆ ಗೋಹತ್ಯೆ ಸಂಪೂರ್ಣವಾಗಿ ನಿಂತು ಹೋಗಿತ್ತೆಂದು ಡಾ. D. R ಭಂಡಾರ್‌ಕರ್‌ರವರು ಪ್ರಮಾಣಗಳೊಡನೆ ತೋರಿಸಿದ್ದಾರೆ ಜನರ ಮನೋಭಾವದಲ್ಲಿ ಈ ರೀತಿಯ ಪರಿವರ್ತನೆಗೆ ಬೌದ್ಧಜೈನತತ್ವಗಳಿಂದ ಪ್ರಚೋದಿತವಾದ ವೃಷಲ ಸಂಪ್ರದಾಯವೇ ಕಾರಣವೆನ್ನಬಹುದು. ಆದ್ದರಿಂದ ಭಾಸ ಈ ಸಂಪ್ರದಾಯ ಹರಡುವುದಕ್ಕೂ ಹಿಂದೆಯೇ (ಅಂದರೆ ಕ್ರಿ.ಪೂ ೪ ನೇ ಶತಮಾನಕ್ಕೂ ಹಿಂದೆಯೇ) ಇದ್ದಿರಬೇಕು.

ಯಜ್ಞ ಯಾಗಾದಿಗಳು ಅವಶ್ಯ ಕರ್ತವ್ಯಗಳೆಂಬುದು ಭಾಸನ ಮತ. ಅವಕಾಶ ದೊರೆತಾಗಲೆಲ್ಲಾ ಅವನು ಇದನ್ನು ಒತ್ತಿ ಹೇಳುತ್ತಾನೆ. ಪಂಚರಾತ್ರ ನಾಟಕದಲ್ಲಿ ದುರ್ಯೋಧನನಿಂದ ಆಚರಿಸಲ್ಪಟ್ಟ ಯಜ್ಞದ ಪ್ರಶಂಸೆ ಸುದೀರ್ಘವಾಗಿಯೇ ಇದೆ. ಕರ್ಣನಾಡುವ 'ಏತೇ ಸಕೋಶಾಃ ಪುರುಷಾಃ ಸರಾಷ್ಟ್ರಾಃ ನಷ್ಟಾಃ ಶರೀರೈಃ ಕ್ರತುಭಿರ್ಧರಂತೇ' (—ಪಂಚರಾತ್ರ I ೨೫) ಮತ್ತು 'ಶಿಕ್ಷಾ ಕ್ಷಯಂ ಗಚ್ಛತಿ ಕಾಲಪರ್ಯಯಾತ್...ಹುತಂ ಚ ದತ್ತಂ ಚ ತಥೈವ ತಿಷ್ಠತಿ'(—ಕರ್ಣಭಾರ I ೨೨) ಎಂಬ ಶ್ಲೋಕಗಳಲ್ಲೂ ಯಜ್ಞಗಳ ವೈಶಿಷ್ಟ್ಯ ಕೊಂಡಾಡಲ್ಪಟ್ಟಿದೆ.

'ಯಜ್ಞಫಲ' ನಾಟಕದಲ್ಲಂತು ರಾಮಾದಿಗಳ ಜನನ ದಶರಥನು ಆಚರಿಸಿದ ಪುತ್ರಕಾಮೇಷ್ಟಿ ಯಾಗದ ಫಲ; ರಾಮನ ಅಸ್ತ್ರಸಂಪಾದನೆ ವಿಶ್ವಾಮಿತ್ರನ ಯಾಗದ ಸಂರಕ್ಷಣೆಯ ಫಲ; ರಾಮಾದಿಗಳ ವಿವಾಹ ಜನಕನು ಮಾಡಿದ ಯಜ್ಞದ ಫಲ; ಇಷ್ಟೇ ಅಲ್ಲದೆ 'ಯಜ್ಞಫಲ' ಎಂಬ ಮಾತು ನಾಟಕದ ಉದ್ದಕ್ಕೂ ಪುನಃ ಪುನಃ ಕೇಳಿ ಬರುತ್ತದೆ. ಯಜ್ಞಯಾಗಾದಿಗಳ ಮೇಲೆ ಭಾಸನಿಗಿದ್ದ ಈ ಅಪಾರ ಗೌರವ ಅವನ ಕಾಲದ ಜನರ ಮನೋಭಾವವನ್ನೇ ಪ್ರತಿಬಿಂಬಿಸುತ್ತದೆಯೆನ್ನಬಹುದಾದ್ದರಿಂದ, ಜನರು ಬೌದ್ಧಮತದ ಕಡೆ ವಾಲುವುದಕ್ಕೆ ಪೂರ್ವವರ್ತಿಯಾದ ಕಾಲದಲ್ಲಿ ಭಾಸನಿದ್ದಿರಬೇಕು.

ಪಾಣಿನಿಯ ವ್ಯಾಕರಣ ನಿಯಮಗಳಿಗೂ ಭರತನ ನಾಟ್ಯಶಾಸ್ತ್ರ ಸಂಪ್ರದಾಯಗಳಿಗೂ ವಿರುದ್ಧವಾದ ಪ್ರಯೋಗಗಳು ಭಾಸನ ಈ ನಾಟಕಗಳಲ್ಲಿ ಕಂಡುಬರುವುದರಿಂದ ಭಾಸನು ಪಾಣಿನಿ ಭರತರಿಗಿಂತ ಹಿಂದಿನವನೆನ್ನುವವರಿದ್ದಾರೆಂದು ಹಿಂದೆ ಹೇಳಿದ್ದೇವೆ. ಭಾಸ ಈಚಿನವನಾಗಿದ್ದರೆ ಭರತ ಮತ್ತು ಪಾಣಿನಿಯ ನಿಯಮಗಳಿಗೆ ಕಟ್ಟುಬೀಳುತ್ತಿದ್ದನೆಂಬುದು ಇವರ ಅಭಿಪ್ರಾಯ. ಪಾಣಿನಿಗಿಂತ ಭಾಸ ಪ್ರಾಚೀನನಾಗಿದ್ದರೆ ಅವನು ಪ್ರಯೋಗಿಸಿರುವ ಶಬ್ದರೂಪಗಳಿಗೆ ಪಾಣಿನಿಯಿಂದಲೇ ಸಮರ್ಥನೆ ದೊರೆತು ಅದಕ್ಕೆ ತಕ್ಕಂತೆ ನಿಯಮಗಳೇರ್ಪಡುತ್ತಿದ್ದುವೆಂಬುದನ್ನು ಇವರು ಮರೆತಿದ್ದಾರೆ. ಆದ್ದರಿಂದ ಭಾಸ ಪಾಣಿನಿಯ (ಹಿರಿಯ) ಸಮಕಾಲೀನನಿದ್ದು ಇಬ್ಬರೂ ತುಂಬ ದೂರದ ಅಂತರವುಳ್ಳ ದೇಶಗಳಲ್ಲಿ ವಾಸಿಸುತ್ತಿದ್ದುದರಿಂದ ಭಾಸನ ಪ್ರಯೋಗಗಳು ಪಾಣಿನಿಗೆ ಆಧಾರವಾಗಲಿಲ್ಲವೆಂದು ಹೇಳುವುದೇ ಸಮಂಜಸವಾಗಬಹುದು.

ಕೆಲವು ವಿದ್ವಾಂಸರು ವ್ಯಾಸವಾಲ್ಮೀಕಿಗಳ ಕಾಲವನ್ನು ಇನ್ನೂ ಹಿಂದಕ್ಕೆ ಹಾಕಿ, ಭಾಸ ಕ್ರಿ.ಪೂ. ೭ನೇ ಶತಮಾನದವನೆನ್ನುತ್ತಾರೆ. ಬಾಣನ ಶ್ಲೋಕದ ಪ್ರಮಾಣವನ್ನು ಅಂಗೀಕರಿಸದೆ ಭಾಸ ಕ್ರಿ.ಶ. ೧೧ನೇ ಶತಮಾನದವನೆನ್ನುವವರೂ ಇದ್ದಾರೆ. ಪಾಣಿನಿಗಿಂತ ಭಾಸ ಹಿಂದಿನವನೆಂಬುದು ಗಣಪತಿಶಾಸ್ತ್ರಿಗಳ ಮತ. ಆದರೆ ಪಾಣಿನಿಯ[30] ಕಾಲವೇ ಸರಿಯಾಗಿ ಗೊತ್ತಾಗಿಲ್ಲ. ಭಾಸನನ್ನು ಪಾಣಿನಿಗಿಂತ ಹಿಂದಿನವನೆಂದು ಎಲ್ಲರೂ ಒಪ್ಪುವುದಿಲ್ಲ. ಕಾಳಿದಾಸನಿಗಿಂತ ಸ್ವಲ್ಪ ಹಿಂದಿನವನೆನ್ನುತ್ತಾರೆ. ಹೀಗಾಗಿ ಭಾಸನ ಕಾಲವೂ ಇತ್ಯರ್ಥವಾಗದೆ ಹಾಗೆಯೇ ಉಳಿದಿದೆ.[31]

---

30. ಪಾಣಿನಿಯ ಕಾಲ ಕ್ರಿ.ಪೂ. ೪ನೇ ಶತಮಾನವೆಂಬುದು ಕೀತ್‌ರವರ ಅಭಿಪ್ರಾಯ.
31. ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯರೀತ್ಯಾ ಭಾಸನ ಕಾಲ—

## III ಭಾಸನು ದಕ್ಷಿಣದೇಶದವನೆ ?

ದಕ್ಷಿಣದೇಶದ ಕೆಲವು ವಿದ್ವಾಂಸರು[31] ಭಾಸ ದಕ್ಷಿಣದೇಶದವನೇ ಎಂದು ಸಿದ್ಧಾಂತಮಾಡಲು ಯತ್ನಿಸಿದ್ದಾರೆ; ಅವನು ಬಹುಶಃ ಕೇರಳದೇಶದವನೇ ಎಂದೂ ಅವರು ಹೇಳುತ್ತಾರೆ. ಅವರು ಮುಂದಿಡುವ ಕಾರಣಗಳು ಇವು—

೧ ಭಾಸಕೃತವೆನ್ನುವ ಹದಿಮೂರು ನಾಟಕಗಳೂ ಕೇರಳದಲ್ಲೇ ದೊರೆತವು.

೨ ರಾಮನ ಪಟ್ಟಾಭಿಷೇಕ ಸಮಯದಲ್ಲೂ ಸೀತೆ ಅವನ ಬಳಿ ಇಲ್ಲ (ಪ್ರತಿಮಾ ನಾಟಕ ನೋಡಿ). ಇದು ಕೇರಳದೇಶದ ಸಂಪ್ರದಾಯ. ಭಾರತದ ಇನ್ನಾವ ಪ್ರಾಂತದಲ್ಲೂ ಹೀಗಿಲ್ಲ.

೩ ಪ್ರತಿಜ್ಞಾನಾಟಕದಲ್ಲಿ ಬರುವ[33] 'ಸಂಬಂಧ', ಅವಿಮಾರಕದಲ್ಲಿ ಬರುವ. 'ವಿಚಾರ' ಎಂಬ ಪದಗಳು ಮಲಯಾಳೀ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ

---

ಗಣಪತಿಶಾಸ್ತ್ರಿ, ಹರಪ್ರಸಾದಶಾಸ್ತ್ರಿ ಮತ್ತು ಪುಸಲ್ಕರ್...ಕ್ರಿ.ಪೂ. ೬ ನೇ ಶತಮಾನ
ಜಾಗೀರ್‌ದಾರ್, ಕುಲಕರ್ಣಿ ....ಕ್ರಿ.ಪೂ. ೩ ನೇ ಶತಮಾನ
ಜಯಸ್ವಾಲ್, ಚೌಧುರೀ, ಧ್ರುವ ....ಕ್ರಿ.ಪೂ. ೨-೧ನೇ ಶತಮಾನ
ಕೋನೋ, ಸರುಪ್, ವೆಲ್ಲರ್ ...ಕ್ರಿ.ಶ. ೨ ನೇ ಶತಮಾನ
ಕೀತ್, ಜಾಲಿ, ಜಾಕೋಬಿ, ಬಾನರ್ಜಿಶಾಸ್ತ್ರಿ ಮತ್ತು
ಭಂಡಾರ್‌ಕರ್ ....ಕ್ರಿ.ಶ. ೩ ನೇ ಶತಮಾನ
ಲಿಸ್ನಿ ಮತ್ತು ವಿಂಟರ್‌ನಿಟ್ಸ್ ....ಕ್ರಿ ಶ. ೪ ನೇ ಶತಮಾನ
ಶಂಕರ್ ...ಕ್ರಿ.ಶ. ೫-೬ ನೇ ಶತಮಾನ
ದೇವಧರ್, ಬಾರ್ನೆಟ್, ಹೀರಾನಂದಶಾಸ್ತ್ರಿ,
ನೆರುರ್‌ಕರ್, ಪಿಶರೋಟಿ ...ಕ್ರಿ.ಶ. ೭ ನೇ ಶತಮಾನ
ಕಾನೆ ...ಕ್ರಿ ಶ. ೯ ನೇ ಶತಮಾನ
ರಾಮಾವತಾರಶರ್ಮ ...ಕ್ರಿ.ಶ. ೧೦ ನೇ ಶತಮಾನ
ರಂಗಾಚಾರ್ಯ ರೆಡ್ಡಿ ....ಕ್ರಿ.ಶ. ೧೧ ನೇ ಶತಮಾನ

ಸೂಚನೆ— ಪ್ರೊ. ಮೆಗ್ಡಾನಲ್‌ರವರು ಭಾಸನ ಕಾಲದ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ.

32. ಪುಸಲ್ಕರ್‌ರವರ 'Bhāsa—A Study' ಪುಟ ೫೨ ಮತ್ತು ಪಿಶರೋಟಿಯವರ 'Bhāsa's works—A Criticism' ನೋಡಿ.

33. ನಮ್ಮ ಹಳ್ಳಿಗಳಲ್ಲಿ ಆಚರಣೆಯಲ್ಲಿರುವ 'ಕೂಡುವಳಿ' ರೀತಿಯ 'ಲೌಕಿಕ ವಿವಾಹ'ಕ್ಕೆ ಮಲಯಾಳದಲ್ಲಿ 'ಸಂಬಂಧ'ವೆನ್ನುತ್ತಾರೆ. ಈ 'ಸಂಬಂಧ'ಕ್ಕೆ ವಧೂವರರು ಒಂದೇ ಜಾತಿಯವರಾಗಿರಬೇಕೆಂಬ ನಿಯಮವಿಲ್ಲ. ಗಂಡ ಹೆಂಡತಿ ಬೇರೆ ಜಾತಿಯವರಾದರೆ

೪ ಸೋದರ ಮಾವನಿಗೆ ವಿಶೇಷ ಪೂಜ್ಯತೆ ಸೂಚಿತವಾಗಿದೆ. ಅವಿಮಾರಕ ತನ್ನ ಸೋದರ ಮಾವನಿಗೆ ಎರಡು ಬಾರಿ ನಮಸ್ಕರಿಸಿ ಮಲಯಾಳದ 'ಮರುಮಕ್ಕತಾಯಂ' ಸಂಪ್ರದಾಯವನ್ನು ಪಾಲಿಸುತ್ತಾನೆ.

೫ ತಮಿಳು ನಾಟಕದ ರಂಗಾಧಿದೇವತೆಯಾದ ಬಲದೇವನನ್ನೇ ಸ್ವಪ್ನವಾಸವದತ್ತದ (ನಾಂದೀ) ಮಂಗಳ ಶ್ಲೋಕದಲ್ಲಿ ಸ್ತೋತ್ರಮಾಡಿರುವುದಲ್ಲದೆ, ಅದೇ ನಾಟಕದಲ್ಲಿ (ಅಂಕ ೪) ಸಾರಸ ಪಕ್ಷಿಯ ಸಾಲನ್ನು ಬಲದೇವನ ತೋಳಿನಂತೆ ಸುಂದರವಾಗಿದೆಯೆಂದು ವರ್ಣಿಸಿರುವುದು ಆ ನಾಟಕದ ಕವಿಯು ದಕ್ಷಿಣದೇಶದವನೇ ಎಂಬುದನ್ನೂ, ದಕ್ಷಿಣದೇಶದಲ್ಲಿ ಜೈನರ ಪ್ರಾಬಲ್ಯ ಹೆಚ್ಚಾಗಿಯೇ ಇದ್ದಾಗ ರಚಿತವಾಗಿ ಬಲದೇವನಿಗೆ ಪಾಶಸ್ತ್ಯ ಹೇಳುವ ಶಿಲಪ್ಪದಿಕಾರ ಎಂಬ ಜೈನಗ್ರಂಥವು ರಚಿತವಾದ ಕಾಲಕ್ಕೆ ಹಿಂದಿನವನಾಗಿದ್ದಿರಬೇಕೆಂಬುದನ್ನೂ ಸೂಚಿಸುತ್ತದೆ.

೬ ಗತಿಸಿಹೋದವರ ಪ್ರತಿಮೆಗಳನ್ನು ಸ್ಥಾಪಿಸುತ್ತಿದ್ದ ದಕ್ಷಿಣದೇಶದ ಪದ್ಧತಿ 'ತೊಲಕ್ಕಾಪ್ಪಿಯ'ದಲ್ಲಿ (ಸೂತ್ರ ೬೦) ವಿಹಿತವಾಗಿದೆ. ಇಂತಹ ಪ್ರತಿಮೆಗಳಿಗೆ ಪೂಜೆಯು ನಡೆಯುತ್ತಿತ್ತು. ಪ್ರತಿಮಾ ನಾಟಕದಲ್ಲಿ ಬರುವ ಪ್ರತಿಮಾಗೃಹ ಈ ಸಂಪ್ರದಾಯದ ಮೇಲೆ ರಚಿತವಾದದ್ದು.

ಈ ಕಾರಣಗಳನ್ನು ಕೂಲಂಕಷವಾಗಿ ವಿಚಾರಮಾಡಿದರೆ ಅವುಗಳಲ್ಲಿ ಯಾವುದೂ ಬಲವಾಗಿ ನಿಲ್ಲುವುದಿಲ್ಲ. ಯಾವುದೋ ಒಂದು ದೇಶದಲ್ಲಿ ಕೆಲವು ಅಜ್ಞಾತಕರ್ತೃಕಗ್ರಂಥಗಳು ಮೊದಮೊದಲು ಸಿಕ್ಕಿದ ಮಾತ್ರಕ್ಕೇ ಅವು ಆ ದೇಶದವನಿಂದಲೇ ರಚಿತವೆನ್ನುವುದು ಸರಿಯಲ್ಲ. ರಾಮನ ಪಟ್ಟಾಭಿಷೇಕ ಕಾಲದಲ್ಲಿ ಸೀತೆ ರಾಮನ ಬಳಿ ಇಲ್ಲದಿರುವುದೇ ಏಕೆ, ತನ್ನ ಗಂಡನಿಗೇ ಆಗುತ್ತಿರುವ ಪಟ್ಟಾಭಿಷೇಕದ ಸಮಾಚಾರವೂ ಆಕೆಗೆ ತಿಳಿಯದಿರುವುದು 'ನಾಟ್ಯಧರ್ಮ' ವೇ ವಿನಾ ದೇಶಾಚಾರಕ್ಕೂ ಅದಕ್ಕೂ ಏನೂ ಸಂಬಂಧವಿಲ್ಲ. [೩೬]'ಸಂಬಂಧ' 'ವಿಚಾರ' ಮುಂತಾದುವು ಸಂಸ್ಕೃತಪದಗಳು; ದೇಶಭಾಷೆಗಳಲ್ಲಿ ಬೆರೆತು ಹೋಗಿವೆ. ಆದ್ದರಿಂದ ಈ ಪದಗಳಿಗೆ ಪ್ರಕೃತನಾಟಕಗಳಲ್ಲಿರುವ

---

'ಸಂಬಂಧ'ವಾದ ಮೇಲೂ ಹೆಂಡತಿ ಮುಟ್ಟಿದ ಆಹಾರವನ್ನು ಗಂಡ ತಿನ್ನುವುದಿಲ್ಲ. ಗಂಡ ಆಚರಿಸುವ ಧಾರ್ಮಿಕ ಕರ್ಮಗಳಲ್ಲಿ ಇಂತಹ ಹೆಂಡತಿಗೆ ಸ್ಥಾನವಿಲ್ಲ. ವಾಸವದತ್ತೆ-ಉದಯನರ ಮದುವೆ ಈ ರೀತಿಯ ಸಂಬಂಧವೆಂದಿಗೂ ಆಗಲಾರದು. ಮಹಾಸೇನನೇ ಹೇಳುವಂತೆ ಅದು ಕ್ಷತ್ರಿಯೋಚಿತ ಗಾಂಧರ್ವ ವಿವಾಹ. ಪ್ರತಿಜ್ಞಾ IV [120] ನೋಡಿ.

ಅರ್ಥ ಹಿಂದಿನ ಕಾಲದಲ್ಲಿ ರೂಢಿಯಲ್ಲಿದ್ದಂಥಾದ್ದೇ ಎಂದು ಹೇಳುವುದೇ ಉಚಿತ. ಸೋದರಮಾವನಿಗೆ ವಿಶೇಷ ಗೌರವ ಸಲ್ಲಬೇಕಾದದ್ದು [34]ಧರ್ಮಶಾಸ್ತ್ರ ವಿಹಿತವಾದದ್ದೇ ವಿನಾ ಮರುಮಕ್ಕತಾಯಂ ಸಂಪ್ರದಾಯಕ್ಕೆ ಮೀಸಲಾದುದಲ್ಲ. ಜೈನರಲ್ಲಿ ಬಲದೇವ ವಾಸುದೇವರು ಕಾರಣಪುರುಷರೆಂದು ಪರಿಗಣಿತರಾಗಿದ್ದಾರೆ. ಆದ್ದರಿಂದ ಸ್ವಪ್ನವಾಸವದತ್ತದಲ್ಲಿ ಬರುವ ಬಲದೇವಸ್ತುತಿರೂಪವಾದ ಮಂಗಳಶ್ಲೋಕದಿಂದ ಹೇಳಬಹುದಾದದ್ದು ಆ ನಾಟಕವು ಜೈನರ ಪ್ರಾಬಲ್ಯ ಕಾಲದಲ್ಲಿ ರಚಿತವಾಗಿರಬಹುದೆಂದೇ ವಿನಾ ದಕ್ಷಿಣದೇಶದಲ್ಲಿ ರಚಿತವಾಯಿತೆಂದಲ್ಲ. ಪ್ರತಿಮಾಗೃಹ ನಿರ್ಮಾಣದ ವಿಷಯವೂ ಹೀಗೆಯೇ. ಇತ್ತೀಚೆಗೆ ಪತ್ತೆಯಾಗಿರುವ ಶಿಶುನಾಗರ ಪ್ರತಿಮೆಗಳೂ ರಾಜಪುಟಾನದಲ್ಲಿ ಗತಿಸಿದ ರಾಜರ ಶಿಲಾಪ್ರತಿಮೆಗಳನ್ನು ಪ್ರತಿಷ್ಠಿಸಿ ಅವಕ್ಕೆ ಪೂಜೆ ಸಲ್ಲಿಸುವ ಪ್ರಾಚೀನ ಕಾಲದಿಂದ ಬಂದಿರುವ ಸಂಪ್ರದಾಯವೂ ಈ ನಾಟಕಗಳು ಕೇರಳ ದೇಶದಲ್ಲೇ ರಚಿತವಾದುವೆಂಬ ವಾದವನ್ನು ಸಂಪೂರ್ಣವಾಗಿ ತಳ್ಳಿಹಾಕಿಬಿಡುತ್ತದೆ.

ಆದರೆ ಈ ನಾಟಕಚಕ್ರದಲ್ಲಿ ಬರುವ ನಾಯಕರು, ನಗರಗಳು, ನದಿಗಳು ಬೆಟ್ಟಗಳು—ಎಲ್ಲವೂ ಉತ್ತರದೇಶದವೇ ಆಗಿರುವುದು ಗಮನಾರ್ಹ. ಈಚೆಗೆ ಭಾಸಕೃತವೆಂದು ಹೇಳಲಾಗುತ್ತಿರುವ 'ಯಜ್ಞಫಲ' ನಾಟಕ ಉತ್ತರದೇಶದಲ್ಲೇ ದೊರೆತಿರುವುದೂ ಭಾಸ ಉತ್ತರದೇಶದವನೆಂಬ ವಾದಕ್ಕೆ ಪೋಷಕವಾದರೂ ಆಗಬಹುದು.

## IV ಭಾಸ ವಿರಚಿತ ಗ್ರಂಥಗಳು

ಗಣಪತಿಶಾಸ್ತ್ರಿಗಳು ಪ್ರಕಟಿಸಿದ ಹದಿಮೂರು ರೂಪಕಗಳೂ ಭಾಸಕೃತವೆಂದೇ ಸಾಮಾನ್ಯವಾಗಿ ಹೇಳಲಾಗುತ್ತಿದೆ. ಇದಲ್ಲದೆ ೧೯೪೧ರಲ್ಲಿ ಪ್ರಕಟಿತವಾದ ಯಜ್ಞಫಲವೆಂಬ ರಾಮಾಯಣದ ಬಾಲಕಾಂಡದ ಕಥೆಯ ಮೇಲೆ ರಚಿತವಾದ ನಾಟಕವನ್ನೂ ಭಾಸನದೆಂದೇ ಕೆಲವರು ಅಭಿಪ್ರಾಯಪಡುತ್ತಿದ್ದಾರೆ.

---

34. ಮನು ii 130; ಬೋಧಾಯನ i 3, 45; ಆಪಸ್ತಂಬ i 14-11; ವಸಿಷ್ಠ xi 2; xiii 41; ಗೌತಮ v 27.

35. ಪಂಚರಾತ್ರದ ನಮ್ಮ ಆಂಗ್ಲಪೀಠಿಕೆಯನ್ನೂ ಡಾ. ದಂಡೇಕರ್‌ರವರ 'The authorship of Yajñaphala' (A.B.O.R.I. Vol. XXXI 1950 pp. 307–314) ಎಂಬ ಲೇಖನವನ್ನೂ ನೋಡಿ.

ಶಾರ್ಙ್ಗಧರಪದ್ಧತಿಯಲ್ಲಿ ಐದು, ಸುಭಾಷಿತಾವಳಿಯಲ್ಲಿ ನಾಲ್ಕು, ಸದುಕ್ತಿ ಕರ್ಣಾಮೃತದಲ್ಲಿ ಮೂರು, ಸೂಕ್ತಿಮುಕ್ತಾವಳಿಯಲ್ಲಿ ಒಂದು,— ಹೀಗೆ ಒಟ್ಟು [36]೧೩ ಶ್ಲೋಕಗಳನ್ನು ಸುಭಾಷಿತ ಸಂಗ್ರಹಕಾರರು ತಮ್ಮ ತಮ್ಮ ಸಂಗ್ರಹ ಗಳಲ್ಲಿ ಸೇರಿಸಿ ಅವು ಭಾಸಕೃತವೆಂದು ಹೇಳಿದ್ದಾರೆ. ಆದರೆ ಅವೊಂದೂ ಈಗ ದೊರೆತಿರುವ ನಾಟಕಗಳಲ್ಲಂತು ಬರುವುದಿಲ್ಲ. ಮುಂದೆ ದೊರಕಬಹುದಾದ ನಾಟಕಗಳಲ್ಲಿ ಈ ಪೈಕಿ ಕೆಲವು ಶ್ಲೋಕಗಳಾದರೂ ಇರಬಹುದೆಂಬ ನಿರೀಕ್ಷೆ ಇದೆ.

ಭಾಸರಚಿತವೆಂದು ಹೇಳಲಾಗುತ್ತಿರುವ ಅನಂತಶಯನದ ೧೩ ರೂಪಕ ಗಳೂ, ಗೊಂಡಾಲಿನಲ್ಲಿ ಪ್ರಕಟವಾದ ಯಜ್ಞಫಲವೂ ಉತ್ತಮವಾದ ಸಂಸ್ಕೃತ ರೂಪಕಗಳೆಂಬುದರಲ್ಲಿ ಸಂದೇಹವೇ ಇಲ್ಲ. ಇವೆಲ್ಲವೂ ಪ್ರದರ್ಶನಕ್ಕೆ ಯೋಗ್ಯವಾಗಿರುವುದು ಇವುಗಳ ವೈಶಿಷ್ಟ್ಯ. ಇವು ಭಾಸಕೃತವಾದ ಮೂಲ ನಾಟಕಗಳ ಸಂಗ್ರಹಗಳು; ಕೇರಳದೇಶದ ನಟರಿಂದ ಪ್ರದರ್ಶನಕ್ಕಾಗಿಯೇ ಹೀಗೆ ರೂಪಾಂತರಿತವಾದುವು ಎಂದು ಕೆಲವರು ವಾದಿಸುತ್ತಾರೆ. ಈ ನಾಟಕ ದಲ್ಲಿ ಪುರುಷಪಾತ್ರಗಳೇ ಹೆಚ್ಚು. ದೂತವಾಕ್ಯ, ಕರ್ಣಭಾರಗಳಲ್ಲಿ ಸ್ತ್ರೀ ಪಾತ್ರವೇ ಇಲ್ಲ. ಪಂಚರಾತ್ರದಲ್ಲಿ ಬರುವ ಬೃಹನ್ನಳೆ ವಸ್ತುತಃ ಅರ್ಜುನನೇ. ಪಂಚರಾತ್ರದ ಕಥಾವಸ್ತುವಿಗೂ ಮಹಾಭಾರತದ ಕಥೆಗೂ ಸಂಬಂಧವೇ ಇಲ್ಲ. ಭಾಸನ ಪಂಚರಾತ್ರರೀತ್ಯಾ ಮಹಾಭಾರತದ ಯುದ್ಧವೇ ನಡೆಯು ವುದಿಲ್ಲ. ಹೀಗೆಯೇ ಒಂದೊಂದು ನಾಟಕದಲ್ಲೂ ಭಾಸನ ಕೈವಾಡ ಪರಿಪೂರ್ಣ ವಾಗಿದೆ. ಒಟ್ಟಿನಲ್ಲಿ ಈ ನಾಟಕಗಳೆಲ್ಲಾ ಕಾಳಿದಾಸಾದಿಗಳಿಂದ ರಚಿತವಾದ ನಾಟಕಗಳಿಗಿಂತ ಸ್ವರೂಪತಃ ಭಿನ್ನವಾಗಿದ್ದರೂ, ಭಾವಪುಷ್ಟಿ, ರಚನಾಕೌಶಲ ಕಲಾನೈಪುಣ್ಯಗಳ ದೃಷ್ಟಿಯಿಂದ ಅವೆಲ್ಲಕ್ಕೂ ಆದರ್ಶಪ್ರಾಯವಾಗಿವೆ.

---

36. ಇವುಗಳಿಗೆ ನಮ್ಮ 'Stanzas attributed to Bhāsa in the anthologies' ಎಂಬ ಅನುಬಂಧ ನೋಡಿ. ಯಶಸ್ತಿಲಕ ಚಂಪೂಕಾರನಾದ ಸೋಮ ದೇವನು 'ಪೇಯಾ ಸುರಾ ಪ್ರಿಯತಮಾಮುಖಂ.. ......' ಎಂಬ ಶ್ಲೋಕವನ್ನು ಭಾಸನವೆಂದು ಹೇಳಿದ್ದಾನೆ. ಈ ಶ್ಲೋಕ ಶಾರ್ಙ್ಗಧರಪದ್ಧತಿಯಲ್ಲೂ ಭಾಸನದೆಂದೇ ಹೇಳ ಲ್ಪಟ್ಟಿದೆ. ಆದರೆ ಇದು ಮಹೇಂದ್ರವಿಕ್ರಮವರ್ಮನ 'ಮತ್ತವಿಲಾಸ'ದಲ್ಲಿದೆ. ಭಾಸನದೆಂದು ಹೇಳುವ ಇತರ ನಾಲ್ಕು ಪದ್ಯಗಳನ್ನು ಬೇರೆ ಬೇರೆ ಸುಭಾಷಿತಸಂಗ್ರಹಕಾರರು ಇತರ ಕವಿ ಕೃತವೆಂದು ಹೇಳಿದ್ದಾರೆ. ಒಂದೇ ಶ್ಲೋಕವನ್ನು ಬೇರೆ ಬೇರೆ ಸುಭಾಷಿತಸಂಗ್ರಹಕಾರರು ಬೇರೆ ಬೇರೆ ಕವಿಗಳದ್ದೆಂದು ಹೇಳಿರುವ ನಿದರ್ಶನಗಳು ಬೇಕಾದಷ್ಟಿವೆ. F. W. ಥಾಮಸ್ ರವರ ಲೇಖನ J.R.A.S. 1927 ಪುಟ ೮೮೩ ನೋಡಿ.

## V ಇತರ ವಿಚಾರಗಳು

ಭಾಸನ ಜೀವಿತದ ವಿಚಾರದಲ್ಲಿ ವಿಶೇಷವಾಗಿ ಏನೊಂದೂ ಹೇಳುವ ಹಾಗಿಲ್ಲ. ಅವನ 'ಕಾಲದ' ವಿಷಯವಾಗಿ ಈಗಾಗಲೇ ಹೇಳಿ ಆಗಿದೆ. ವ್ಯಾಸ ವಾಲ್ಮೀಕಿಗಳಂತೆ ಅವನೂ ಒಬ್ಬ 'ಮುನಿ' ಯಾಗಿದ್ದಿರಬಹುದು. ಅವನು ವೈಷ್ಣವ ಸಂಪ್ರದಾಯದವನೆಂದು ಸ್ಥೂಲವಾಗಿ ಹೇಳಬಹುದು. ಭಾಸನ ನಾಟಕಗಳ ನಾಯಕರಿಗೆ ಬ್ರಾಹ್ಮಣೋಚಿತ ಕರ್ಮಗಳ ಮತ್ತು ಆಚಾರ ಸಂಪ್ರದಾಯಗಳ ವಿಚಾರದಲ್ಲಿ ಅತ್ಯಂತ ಮರ್ಯಾದೆಯಿಂದ ಕೂಡಿದ ವ್ಯವಹಾರ ವಿರುವುದೂ, ಬಾಲಚರಿತದಲ್ಲಿ ಕಂಸ ಹೇಳುವ — 'ಬ್ರಾಹ್ಮಣರಾಡುವ ಅಸತ್ಯವೂ ನನಗೆ ಸತ್ಯವೇ' ಎಂಬ ಮಾತೂ ಭಾಸನಿಗೆ ಬ್ರಾಹ್ಮಣರ ಮತ್ತು ಬ್ರಾಹ್ಮಣ್ಯದ ಮೇಲಿದ್ದ ಅಭಿಮಾನ, ಗೌರವಗಳನ್ನು ಸೂಚಿಸುತ್ತವೆ ಧರ್ಮ ಪರಿಪಾಲನೆ ಪ್ರತಿಯೊಬ್ಬನ ಆದ್ಯ ಕರ್ತವ್ಯ. 'ರಾಜನಾದವನು [37]ಭೂಮಿ ಯನ್ನು ನ್ಯಾಯವಾದ ರೀತಿಯಲ್ಲಿ ಪರಿಪಾಲಿಸಿದರೆ, ಆ ಭೂಮಿಯು ಅವನನ್ನು ಆಪತ್ಕಾಲದಲ್ಲಿ ಖಂಡಿತವಾಗಿಯೂ ರಕ್ಷಿಸುತ್ತದೆ.' [38]'ಸ್ವರ್ಗ ಪರೋಕ್ಷವಲ್ಲ; ಅದು ಬಹುಗುಣವಾಗಿ ಇಹಲೋಕದಲ್ಲೇ ಫಲಿಸುತ್ತದೆ.' [39]'ಯಾಚಿತವಾದ ಭೈಕ್ಷ್ಯದ ವಿಷಯದಲ್ಲೂ ಜನ ಆಡಿದ ಮಾತನ್ನು ಉಳಿಸಿಕೊಂಡರೇ ಅವರೂ ಉಳಿಯುವುದು'—ಇದು ಭಾಸನ ದೃಢವಾದ ನಂಬಿಕೆ.

ಯಜ್ಞಯಾಗಾದಿಗಳನ್ನೂ ದಾನಮಾಡುವುದನ್ನೂ ಭಾಸ ವಿಶೇಷವಾಗಿ ಕೊಂಡಾಡುತ್ತಾನೆ. ಕರ್ಣನಾಡುವ

ಇಕ್ಷ್ವಾಕು-ಶರ್ಯಾತಿ-ಯಯಾತಿ-ರಾಮ-ಮಾಂಧಾತೃ-ನಾಭಾಗ-ನೃಗಾಂಬರೀಷಾಃ |
ಏತೇ ಸಕೋಶಾಃ ಪುರುಷಾಃ ಸರಾಷ್ಟ್ರಾಃ ನಷ್ಟಾಃ ಶರೀರೈಃ ಕ್ರತುಭಿರ್ಧರಂತೇ॥ ಪಂಚ i 25

ಶಿಕ್ಷಾ ಕ್ಷಯಂ ಗಚ್ಛತಿ ಕಾಲಪರ್ಯಯಾತ್, ಸುಬದ್ಧಮೂಲಾ ನಿಪತಂತಿ ಪಾದಪಾಃ |
ಜಲಂ ಜಲಸ್ಥಾನಗತಂ ಚ ಶುಷ್ಯತಿ, ಹುತಂ ಚ ದತ್ತಂ ಚ ತಥೈವ ತಿಷ್ಠತಿ॥ ಕ.ಭಾ. i 22.

— ಈ ಎರಡು ಶ್ಲೋಕಗಳೂ ಭಾಸನ ಮನೋಗತವನ್ನೇ ಪ್ರತಿಬಿಂಬಿಸು ತ್ತವೆಂಬುದರಲ್ಲಿ ಸಂಶಯವಿಲ್ಲ.

ಪುರುಷಪ್ರಯತ್ನಕ್ಕಿಂತ ಅದೃಷ್ಟವೇ ಬಲವತ್ತರವಾದುದೆಂದು[40] ಭಾಸ

37. ಪ್ರತಿಜ್ಞಾ i 9 38. ಪಂಚರಾತ್ರ i 23 39. ಪಂಚರಾತ್ರ iii 25
40. ೧ ಜಾಗ್ರತೋಪಿ ಬಲವತ್ತರಃ ಕೃತಾಂತಃ—ಪ್ರತಿಜ್ಞಾ I. ೨ ಚಕ್ರಾರಪಂಕ್ತಿರಿವ

ಪದೇ ಪದೇ ಹೇಳಿದರೂ, ಸರಿಯಾದ ಮಾರ್ಗದಲ್ಲಿ ಆರಂಭಿಸಿದ ಉತ್ಸಾಹ ಶೀಲರ ಯತ್ನಗಳು ಫಲಿಸಿಯೇ ಫಲಿಸುತ್ತವೆಂದು ಸಾರುವ

ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾತ್, ಭೂಮಿಸ್ತೋಯಂ ಖನ್ಯಮಾನಾ ದದಾತಿ ।
ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ ಮಾರ್ಗಾರಬ್ಧಾಃ ಸರ್ವಯತ್ನಾಃ ಫಲಂತಿ ॥

ಎಂಬ ಅವನ ಪ್ರತಿಜ್ಞಾಯೌಗಂಧರಾಯಣದ (i 18) ಶ್ಲೋಕ ಎಂತಹ ಅದೃಷ್ಟವಾದಿಗಳನ್ನೂ ತಟ್ಟಿ ಎಬ್ಬಿಸಿ ಕಾರ್ಯೋನ್ಮುಖರಾಗುವಂತೆ ಮಾಡುತ್ತದೆ.

ಸುಭಾಷಿತಾವಳಿಯಲ್ಲಿ ಭಾಸನದೆಂದು ಹೇಳಿರುವ

41 ದುಃಖಾರ್ತೇ ಮಯಿ ದುಃಖಿತಾ ಭವತಿ ಯಾ, ಹೃಷ್ಟೇ ಪ್ರಹೃಷ್ಟಾ ತಥಾ,
ದೀನೇ ದೈನ್ಯಮುಪೈತಿ, ರೋಷಪರುಷೇ ಪಥ್ಯಂ ವಚೋ ಭಾಷತೇ ।
ಕಾಲಂ ವೇತ್ತಿ, ಕಥಾಃ ಕರೋತಿ ನಿಪುಣಾಃ, ಮತ್ಸಂಸ್ತವೇ ರಜ್ಯತಿ,
ಭಾರ್ಯಾ, ಮಂತ್ರಿವರಃ, ಸಖಾ, ಪರಿಜನಃ ಸೈಕಾ ಬಹುತ್ವಂ ಗತಾ ॥

—ಎಂಬ ಶ್ಲೋಕ ಭಾರತೀಯ ಆದರ್ಶಪತ್ನಿಯಲ್ಲಿರಬೇಕಾದ ಮುಖ್ಯ ಲಕ್ಷಣಗಳನ್ನು ಲೋಕಕ್ಕೆ ಸಾರುವಂತಿದೆ.

ಹೆಣ್ಣುಮಕ್ಕಳಿಗಾಗಿ ವರಾನ್ವೇಷಣೆ ಮಾಡುವಾಗ ವರನಲ್ಲಿ ಯಾವ ಯಾವ ಗುಣ ಯೋಗ್ಯತೆಗಳನ್ನು ಪ್ರಧಾನವಾಗಿ ನಿರೀಕ್ಷಿಸಬೇಕೆಂಬುದನ್ನು

ಕುಲಂ ತಾವತ್+ಶ್ಲಾಘ್ಯಂ ಪ್ರಥಮಮಭಿಕಾಂಕ್ಷೇ ಹಿ ಮನಸಾ
ತತಃ ಸಾನುಕ್ರೋಶಂ, ಮೃದುರಪಿ ಗುಣೋ ಹಿ+ಏಷ ಬಲವಾನ್ ।
ತತೋ ರೂಪೇ ಕಾಂತಿಂ, ನ ಖಲು ಗುಣತಃ, ಸ್ತ್ರೀಜನಭಯಾತ್
ತತೋ ವೀರ್ಯೋದಗ್ರಂ, ನ ಹಿ ನ ಪರಿಪಾಲ್ಯಾ ಯುವತಯಃ ॥

ಎಂಬ (ಪ್ರತಿಜ್ಞಾ ii 4) ಶ್ಲೋಕದಲ್ಲಿ ಭಾಸ ವಿವರಿಸಿದ್ದಾನೆ.

ಹೀಗೆ ಭಾಸ ಬೇರೆ ಬೇರೆ ವಿಚಾರಗಳಲ್ಲಿ ತನ್ನ ಅಭಿಪ್ರಾಯಗಳನ್ನೂ ಆದರ್ಶಗಳನ್ನೂ ತನ್ನ ಒಂದೊಂದು ನಾಟಕದಲ್ಲೂ ಹೃದಯಂಗಮವಾಗಿ ನಿರೂಪಿಸಿದ್ದಾನೆ.

---

ಗಚ್ಛತಿ ಭಾಗ್ಯಪಂಕ್ತಿಃ—ಸ್ವಪ್ನ I. ಕಃ ಕಂ ಶಕ್ತೋ ರಕ್ಷಿತುಂ. ಮೃತ್ಯುಕಾಲೇ ರಜ್ಜುಚ್ಛೇದೇ ಕೇ ಘಟಂ ಧಾರಯಂತಿ—ಸ್ವಪ್ನ VI 10.

41. ಈ ಶ್ಲೋಕ ಪ್ರಾಯಃ ಸ್ವಪ್ನವಾಸವದತ್ತ ನಾಟಕದ್ದಿರಬಹುದು. ವತ್ಸರಾಜ ತನ್ನ ಪ್ರಿಯಪತ್ನಿ ವಾಸವದತ್ತೆಯ ಗುಣಾತಿಶಯಗಳನ್ನು ನೆನೆಸಿಕೊಂಡು ಆಡುವ ಈ ಮಾತು ಈಗ ಉಪಲಬ್ಧವಾಗಿರುವ ನಾಟಕದ ೫ನೇ ಅಂಕದ ೫-೬ನೇ ಶ್ಲೋಕಗಳಂತೆಯೇ ಇರುವುದೂ, ಅದೇ ಸಂದರ್ಭಕ್ಕೇ ಹೊಂದಿಕೊಳ್ಳುವುದೂ ಗಮನಾರ್ಹ.

42. A.S.P. ಅಯ್ಯರ್‌ರವರ 'Bhāsa' ಪುಟ 284–294 ನೋಡಿ.

## VI ಭಾಸನ ಶೈಲಿ

ಸ್ಥೂಲವಾಗಿ ನೋಡಿದಾಗ ಭಾಸನ ಶೈಲಿ ತುಂಬ ಸರಳ, ಲಲಿತ ಅನ್ನುವ ಹಾಗಿದೆಯಾದರೂ ಕೂಲಂಕಷವಾಗಿ ಪರಿಶೀಲಿಸಿದ ಮೇಲೆ ಅದು ಮೊದಲು ಎಷ್ಟೆಷ್ಟು ಲಲಿತವಾಗಿ ಕಾಣಿಸುತ್ತದೋ ಅಷ್ಟಷ್ಟು ಬಿಗಿಯಾದುದು, [43]ಸತ್ವಶಾಲಿಯಾದುದು ಎಂಬುದು ವ್ಯಕ್ತವಾಗುತ್ತದೆ. ಭಾಸನು ಅವಶ್ಯಕತೆಗಿಂತ ಒಂದು ಪದ ಕಮ್ಮಿ ಉಪಯೋಗಿಸಿಯಾನೇ ವಿನಾ ಒಂದರ್ಥ ಪದವನ್ನೂ ಹೆಚ್ಚಾಗಿ ಬಳಸುವುದಿಲ್ಲ. ಕ್ಲಿಷ್ಟವಾದ ಪದಗಳೂ ಉದ್ದುದ್ದದ ಪದಗಳೂ ಪ್ರಾಯಃ ಅವನ ಕೃತಿಗಳಲ್ಲಿಲ್ಲವೆಂದೇ ಹೇಳಬಹುದು. ಆದರೆ ಕೆಲವು ಪದಗಳು ಅವನ ಕಾಲದಲ್ಲಿ ಬಳಕೆಯಲ್ಲಿದ್ದ[44] ಅರ್ಥದಲ್ಲಿ ಪ್ರಯೋಗಿಸಲ್ಪಟ್ಟದ್ದು ಈಗ ಆ ಪದಗಳಿಗೆ ಬೇರೆ ಅರ್ಥ ರೂಢಿಯಲ್ಲಿರುವ ಸಂದರ್ಭಗಳಿವೆ. ಪದ ಪ್ರಯೋಗದಲ್ಲಿ ಹೇಗೋ ಹಾಗೆಯೇ ಪದಸಮೂಹಗಳ ಪ್ರಯೋಗದಲ್ಲೂ ಈಚಿನವರಿಗೆ ಸಮಸ್ಯೆ ತಂದೊಡ್ಡುವ ಸಂದರ್ಭಗಳಿವೆ. ಅಂತಹ ಕಡೆಗಳಲ್ಲಿ ಅರ್ಥ ಹೇಳುವವರು ಎಡವಿದರೆ ಅದು ಭಾಸನ ತಪ್ಪಾಗಲಾರದು.

ಒಂದು ಸಲ ಬಳಸಿದ ಪದ, ಪದಸಮೂಹ, ಶ್ಲೋಕ, ಶ್ಲೋಕಭಾಗ ಮತ್ತು ವಾಕ್ಯಗಳನ್ನು [45]ಪುನಃ ಪುನಃ ಅದೇ ನಾಟಕದಲ್ಲೂ ಬೇರೆ ನಾಟಕಗಳಲ್ಲೂ ಬಳಸುವುದು ಭಾಸನ ಶೈಲಿಯ ಒಂದು ಚಾಳಿಯೆನ್ನಬಹುದು. ಅವನು ಬಳಸುವ ಅಲಂಕಾರಗಳೆಲ್ಲವೂ [46]ಸರಳವಾದುವು, ಸಾಮಾನ್ಯ ಜನರು ದಿನವಹಿ ಪ್ರಯೋಗಿಸುವಂತಹವು. [47]ಶ್ಲೇಷಾರ್ಥ ಬರುವಂತೆ ಪದ ಬಳಸಿರುವ ನಿದರ್ಶನ

---

43. ಉದಾಹರಣೆ—'ಕಥಂ ಲಂಬಸಟಃ ಸಿಂಹೋ ಮೃಗೇಣ ವಿನಿಪಾತ್ಯತೇ ? ಗಜೋ ವಾ ಸುಮಹಾನ್ ಮತ್ತಃ ಶೃಗಾಲೇನ ನಿಹನ್ಯತೇ ॥ '—ಅಭಿಷೇಕ iii 20

44. ೧) ಸರ್ವಂ ಹಿ ಸೈನ್ಯಮನುರಾಗಮೃತೇ ಕಳತ್ರಂ—ಪ್ರ. ಯೌ. i 4
೨) ಮೃತೇಪಿ ಹಿ ನರಾಸ್ಸರ್ವೇ ಸತ್ಯೇ ತಿಷ್ಠಂತಿ ತಿಷ್ಠತಿ—ಪಂಚರಾತ್ರ iii

45. ೧) 'ವಕ್ಷಃ ಪ್ರಸಾರಯ ಕವಾಟಪುಟಪ್ರಮಾಣಂ....'-ಪ್ರತಿಮಾ iv 16; vii 7
೨) ಪೀಠಿಕೆ ಪುಟ 7 ಅಡಿಟಿಪ್ಪಣಿ 7 ಮತ್ತು 9 ನೋಡಿ.

46. ಉಪಮೆ, ಉತ್ಪ್ರೇಕ್ಷೆಗಳೇ ಹೆಚ್ಚು.

47. ೧) 'ವರಮುಖಂ ಪ್ರೇಕ್ಷೇ' ಮತ್ತು 'ಪರಕೀಯಾವಿವ ತೇ ಹಸ್ತೌ'—ಸ್ವಪ್ನ i
೨) ಅಭಿಲಷಣೀಯಾಃ ಖಲು ವರಗುಣಾಃ—ಪ್ರತಿಜ್ಞಾ ii [103]

ಗಳೂ ಇವೆ; ಆದರೆ ಅವು ಬಹಳ ಕಡಿಮೆ. [48]ಅನುಪ್ರಾಸ ಮತ್ತು ಯಮಕಗಳು ಅಲ್ಲಲ್ಲೇ ಬಂದು ಭಾಸನ ವಾಕ್ಯಗಳಿಗೆ ಮೆರಗು ಕೊಡುತ್ತವೆ.

ಅವನು ತನ್ನ ಪಾತ್ರಗಳಿಂದಾಡಿಸುವ ಎಷ್ಟೋ ಮಾತುಗಳು ನಿತ್ಯಸತ್ಯಗಳಿಂದ ಗರ್ಭಿತವಾಗಿದ್ದು [49]ಸೂಕ್ತಿರತ್ನಗಳಾಗಿ ಪರಿಗಣಿತವಾಗಲು ಅರ್ಹವಾಗಿವೆ. ಅವನು ಮಧ್ಯೆ ಮಧ್ಯೆ ತರುವ ಪತಾಕಾಸ್ಥಾನಗಳಂತೂ ಪ್ರೇಕ್ಷಕರನ್ನೂ ವಾಚಕರನ್ನೂ ಮುಗ್ಧರನ್ನಾಗಿ ಮಾಡಿಬಿಡುತ್ತವೆ. ಅವನ ವರ್ಣನೆಗಳಲ್ಲಿ ಕೆಲವು [51]ದೀರ್ಘವಾಗಿದ್ದರೂ ಕಣ್ಣಿಗೆ ಕಟ್ಟಿದಂತಿದ್ದು ಮನಮೋಹಕಗಳಾಗಿವೆ.

ಭಾಸನ [52]ಹಾಸ್ಯ ಎಂತಹವರನ್ನಾದರೂ ನಗುವಂತೆ ಮಾಡುತ್ತದೆ. ಎಷ್ಟೋ ಕಡೆ ಅದು ವಾಚ್ಯವಾಗಿರದೆ ಧ್ವನಿತವಾಗಿದ್ದರೂ ಎಲ್ಲರಿಗೂ ಸಾಮಾನ್ಯವಾಗಿ ಅರ್ಥವಾಗುವಂತಹುದು. ಕೆಲವು ಕವಿಗಳಿಗೆ ಸಹಜವಾಗಿಯೇ ಇರುವ ಅಶ್ಲೀಲ ಹಾಸ್ಯ ಭಾಸನಿಗೆ ಅಪರಿಚಿತ. ತಾನು ಗಂಭೀರನಾಗಿಯೇ ಆಡಿದ ಮಾತನ್ನು ಕೇಳಿದವರು ನಗುವಾಗ ಅದನ್ನು ನೋಡಿ ಅಂತರಿಕವಾಗಿ ಸಂತೃಪ್ತಿ ಪಡೆಯುವ ಮನೋವೃತ್ತಿಯುಳ್ಳವನು ಭಾಸ. ಆದ್ದರಿಂದಲೇ ಜಯದೇವ ಕವಿಯು ಭಾಸನನ್ನು [53]'ಕವಿತಾಕಾಮಿನಿಯ ಹಾಸ' ಎಂದು ಕರೆದಿದ್ದಾನೆ.

---

48. ೧) ರಘುಕುಲಪ್ರದೀಪಸ್ಯ ಸರ್ವಲೋಕನಯನಾಭಿರಾಮಸ್ಯ ಚ
ಸುವಿಪುಲ ಮಹಾಗ್ರೀವಸ್ಯ ಸುಗ್ರೀವಸ್ಯ ಚ—ಅಭಿಷೇಕ—ಸ್ಥಾಪನೆ.
೨) ಸಂಪ್ರಾಪ್ತಾ ಹರಿವರಬಾಹು-ಸಂಪ್ರಗುಪ್ತಾ ಕಿಷ್ಕಿಂಧಾ ತವ ನೃಪ ಬಾಹು-ಸಂಪ್ರಗುಪ್ತಾ—ಅಭಿಷೇಕ i 7
೩) ಶೂನ್ಯಃ ಪ್ರಾಪ್ತೋ ಯದಿ ರಥಃ ಭಗ್ನೋ ಮಮ ಮನೋರಥಃ ।
ನೂನಂ ದಶರಥಂ ನೇತುಂ ಕಾಲೇನ ಪ್ರೇಷಿತೋ ರಥಃ ॥–ಪ್ರತಿಮಾ ii 11
49. ಈ ನಾಟಕದಲ್ಲಿ ಬರುವ ಸೂಕ್ತಿರತ್ನಗಳನ್ನು ಅನುಬಂಧವಲ್ಲಿ ಕೊಟ್ಟಿದೆ.
50. ಪ್ರತಿಜ್ಞಾ ii 18-19 ಮತ್ತು ಅಭಿಷೇಕ v ನೋಡಿ.
51. ಪಂಚರಾತ್ರದ ಆದಿಯಲ್ಲೇ ಬರುವ ಯಜ್ಞದ ಮತ್ತು ಅಗ್ನಿಯ ವರ್ಣನೆ ನೋಡಿ.
52. ಪ್ರತಿಜ್ಞಾ iii ಮತ್ತು iv; ಸ್ವಪ್ನ v; ಪ್ರತಿಮಾ iii ಪ್ರವೇಶಕ ನೋಡಿ.
53. ಯಸ್ಯಾಶ್ಚೋರಶ್ಚಿಕುರನಿಕರಃ ಕರ್ಣಪೂರೋ ಮಯೂರಃ
ಭಾಸೋ ಹಾಸಃ ಕವಿಕುಲಗುರುಃ ಕಾಳಿದಾಸೋ ವಿಲಾಸಃ ।
ಹರ್ಷೋ ಹರ್ಷಃ ಹೃದಯವಸತಿಃ ಪಂಚಬಾಣಃ ಸ ಬಾಣಃ
ಕೇಷಾಂ ನೈಷಾ ಕಥಯ ಕವಿತಾಕಾಮಿನೀ ಕೌತುಕಾಯ ॥
—ಪ್ರಸನ್ನರಾಘವ ೧

## ೨ ಪಂಚರಾತ್ರಂ

### 1 ಕಥಾಸಂಗ್ರಹ

#### ಅಂಕ ೧ (ದೃಶ್ಯ—ಯಜ್ಞಭೂಮಿ)

[ವಿಷ್ಕಂಭಕ— ಪಾಂಡವರು ಅಜ್ಞಾತವಾಸದಲ್ಲಿದ್ದ ಕಾಲ. ಆಗ ದುರ್ಯೋಧನ ಯಾಗವೊಂದನ್ನು ತುಂಬ ವೈಭವದಿಂದ ಮಾಡಿದ. ಅದರ ವೈಖರಿಯನ್ನು ವರ್ಣಿಸುತ್ತಾ ಮೂವರು ಬ್ರಾಹ್ಮಣರು ಬರುತ್ತಾರೆ. ದುರ್ಯೋಧನನ ಅವಭೃಥಸ್ನಾನ ಇನ್ನೂ ಮುಗಿ ದಿರುವುದಿಲ್ಲ. ಅಷ್ಟರಲ್ಲೇ ಕೆಲವು ಹುಡುಗರು ಅಲ್ಲಿನ ಪ್ರಾಗ್ವಂಶ ಮುಂತಾದುವುಗಳಿಗೆ ಬೆಂಕಿ ಹೊತ್ತಿಸಿಬಿಡುತ್ತಾರೆ. ಆ ಬೆಂಕಿ ಹತ್ತಿಕೊಂಡು ಸುತ್ತ ಹರಡಿ ಆರಿಹೋಗುವ ವರೆಗೂ ಅದನ್ನೇ ಆ ಬ್ರಾಹ್ಮಣರು ವೀಕ್ಷಿಸುತ್ತಿದ್ದು, ಬಳಿಕ ದುರ್ಯೋಧನನನ್ನು ಸನ್ಮಾನಿ ಸಲು ಅವನಲ್ಲಿಗೆ ತೆರಳುತ್ತಾರೆ.]

ದುರ್ಯೋಧನನ ಯಾಗ ನಿರ್ವಿಘ್ನವಾಗಿ, ಚೆನ್ನಾಗಿ ನಡೆದು ಎಲ್ಲರೂ ಸಂತೃಪ್ತರಾಗಿದ್ದಾರೆ. ಕರ್ಣ ಮುಂತಾದವರು ದುರ್ಯೋಧನನನ್ನು ಕಂಡು ತಮ್ಮ ಮೆಚ್ಚುಗೆಯನ್ನೂ ಸಂತೋಷವನ್ನೂ ವ್ಯಕ್ತಪಡಿಸುತ್ತಾರೆ. ದುರ್ಯೋ ಧನನು ದ್ರೋಣನಿಗೂ ಭೀಷ್ಮನಿಗೂ ಶಕುನಿಗೂ ನಮಸ್ಕರಿಸಿ ಕರ್ಣನನ್ನು ಆಲಿಂಗಿಸಿಕೊಳ್ಳುತ್ತಾನೆ. ಯಜ್ಞಕ್ಕೆ ಬಂದಿದ್ದ ರಾಜರು ಒಬ್ಬೊಬ್ಬರಾಗಿ ದುರ್ಯೋಧನನನ್ನು ಸನ್ಮಾನಿಸುತ್ತಾರೆ. ಅವರಿಗೆ ತನ್ನ ಧನ್ಯವಾದವನ್ನರ್ಪಿಸಿ, ದುರ್ಯೋಧನನು ಧರ್ಮಬೋಧೆಯಲ್ಲೂ ಧರ್ಮವಿದ್ಯೆಯಲ್ಲೂ ತನಗೆ ಆಚಾರ್ಯ ನಾಗಿದ್ದ ದ್ರೋಣನನ್ನು ಪೂಜಿಸಿ, ಆಚಾರ್ಯನಿಗೆ ಇಷ್ಟವಾದ ದಕ್ಷಿಣೆಯನ್ನು ತಾನು ಕೊಡುವುದಾಗಿಯೂ ಅದನ್ನು ಸ್ವೀಕರಿಸಬೇಕೆಂದೂ ಕೇಳಿಕೊಳ್ಳುತ್ತಾನೆ. ದ್ರೋಣ ತನ್ನ ಇಷ್ಟವನ್ನು ತಿಳಿಸದೆ ಹಿಂದುಮುಂದು ನೋಡುತ್ತಿರುವುದನ್ನು ಗಮನಿಸಿ ದುರ್ಯೋಧನನು ಆಚಾರ್ಯನ ಕೈಮೇಲೆ ನೀರನ್ನು ಧಾರೆಯೆರೆದು ಪ್ರತಿಜ್ಞೆ ಮಾಡುತ್ತಾನೆ ಆಗ ದ್ರೋಣ—'ಪಾಂಡವರೊಡನೆ ನೀನು ರಾಜ್ಯ ವಿಭಾಗ ಮಾಡಿಕೋ. ಇದೇ ನಾನು ಯಾಚಿಸುವ ಭಿಕ್ಷೆ; ಇದೇ (ನೀನು) ನನಗೆ (ಕೊಡಬಹುದಾದ) ದಕ್ಷಿಣೆಯೂ' ಎಂದು ಹೇಳುತ್ತಾನೆ. ಈ ಮಾತನ್ನು ಕೇಳಿ ಶಕುನಿ ಕೆರಳಿ—'ಆದಾಗದು ಇದು ನಂಬಿದ ಶಿಷ್ಯನಿಗೆ ಮಾಡುತ್ತಿರುವ ವಂಚನೆ' ಎಂದು ಕೂಗಾಡುತ್ತಾನೆ. ಪರಸ್ಪರ ಸಂವಾದ ಬಿರುಸಾಗಿಯೇ ಸಾಗುತ್ತದೆ. ಆಗ ಕರ್ಣ ಭೀಷ್ಮರು ಮಧ್ಯೆ ಪ್ರವೇಶಿಸಿ ಸ್ವಲ್ಪ

ಮಟ್ಟಿಗೆ ಸಮಾಧಾನ ಮಾಡುತ್ತಾರೆ. ದುರ್ಯೋಧನ ತಾನು ಆಡಿದ್ದ ಮಾತನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂದು ಶಕುನಿಗೆ ಹೇಳುತ್ತಾನೆ. ಅಗ ಶಕುನಿ ದ್ರೋಣನಿಗೆ 'ಇನ್ನೂ ಐದು ರಾತ್ರಿಗಳಲ್ಲಿ ಪಾಂಡವರ ಸಮಾಚಾರವನ್ನು ತಿಳಿದುಕೊಂಡು ಬಂದದ್ದೇ ಆದರೆ (ಅರ್ಧರಾಜ್ಯವನ್ನು ದುರ್ಯೋಧನ) ಕೊಟ್ಟೇ ಕೊಡುತ್ತಾನಂತೆ' ಎಂದು ತಿಳಿಸುತ್ತಾನೆ. ದ್ರೋಣನಿಗೆ ಕೋಪ ಉಕ್ಕೇರಿ ಬರುತ್ತದೆ. 'ಅವರಿಗೆ ಮೋಸವನ್ನೇ ಮಾಡಬೇಕೆನ್ನುವ ನಿಮಗೇ ಈ ಹನ್ನೆರಡು ವರ್ಷಗಳಿಂದ ಪತ್ತೆಯಾಗದ ಆ ಪಾಂಡವರನ್ನು ನಾನು ಐದು ರಾತ್ರಿಯಲ್ಲಿ ಕರೆತರಬೇಕು, ಅಲ್ಲವೆ? ಇದಕ್ಕಿಂತ, ಸ್ಪಷ್ಟವಾಗಿ ಕೊಡಲಾಗುವುದಿಲ್ಲವೆಂದು ಹೇಳುವುದೇ ಮೇಲು' ಎನ್ನುತ್ತಾನೆ. ಅಷ್ಟರಲ್ಲಿ ವಿರಾಟನಗರದಿಂದ್ದ ದೂತ ನೊಬ್ಬ ಬಂದು ನೂರುಜನ ಕೀಚಕರೂ ಅಜ್ಞಾತನೊಬ್ಬನಿಂದ ಹತರಾದರೆಂದೂ ಅವರ ಮೈಮೇಲೆ ಶಸ್ತ್ರದಿಂದಾದ ಗಾಯವೇನೂ ಇರಲೇಇಲ್ಲವೆಂದೂ ಇದ ರಿಂದಾಗಿ ವಿರಾಟ ದುಃಖದಲ್ಲಿದ್ದಾನೆಂದೂ ತಿಳಿಸುತ್ತಾನೆ. ಇದನ್ನು ಕೇಳಿದ ಭೀಷ್ಮ ಇಂತಹ ಕೆಲಸ ಭೀಮನೊಬ್ಬನಿಂದಲೇ ಸಾಧ್ಯವೆಂನೂ ಆದ್ದರಿಂದ ಪಾಂಡವರು ವಿರಾಟನಗರದಲ್ಲಿರಬೇಕೆಂದೂ ಊಹಿಸಿ, 'ಪಂಚರಾತ್ರ'ದ ಒಪ್ಪಂದವನ್ನು ಅಂಗೀಕರಿಸುವಂತೆ ದ್ರೋಣನಿಗೆ ಒತ್ತಾಯಮಾಡುತ್ತಾನೆ. ಆದರಂತೆ ಎಲ್ಲರೆದುರಿಗೂ ದ್ರೋಣ ದುರ್ಯೋಧನರ ಒಪ್ಪಂದವಾದಮೇಲೆ ಭೀಷ್ಮನು, ವಿರಾಟನು ಯಜ್ಞಕ್ಕೆ ಬಾರದಿದ್ದ ಅಪರಾಧಕ್ಕಾಗಿ ಅವನ ಗೋವು ಗಳನ್ನು ಹಿಡಿದು ಬಂಧಿಸುವಂತೆ ದುರ್ಯೋಧನನನ್ನು ಹುರಿದುಂಬಿಸುತ್ತಾನೆ. ದುರ್ಯೋಧನನೇ ತನ್ನ ಸಮಸ್ತ ಪರಿವಾರದೊಡನೆ ಗೋಗ್ರಹಣಕ್ಕೆ ಮುಂದಾಗುತ್ತಾನೆ.

ಅಂಕ ೨ (ದೃಶ್ಯ--ವಿರಾಟನ ಆಸ್ಥಾನ)

[ಪ್ರವೇಶಕ—ವಿರಾಟ ಮಹಾರಾಜನ ವರ್ಷವರ್ಧಂತಿಯ ನಿಮಿತ್ತವಾಗಿ ಗೋದಾನ ಮಾಡಲು ಗೋವುಗಳನ್ನು ಕರೆಹಾಕಿ ಗೋಪಾಲಕರೆಲ್ಲ ಅಂದಿನ ಉತ್ಸವದ ಸಂಭ್ರಮದಲ್ಲಿದ್ದಾರೆ. ಆಗ ರಥಾರೂಢರಾಗಿ ಧೃತರಾಷ್ಟ್ರನ ಕಡೆಯವರು ಬಂದು ಗೋವು ಗಳನ್ನೆಲ್ಲ ಹಿಡಿದುಕೊಂಡು ಹೋಗುವುದನ್ನೂ ಬಾಣಪ್ರಯೋಗ ಮಾಡುವುದನ್ನೂ ಗಮ ನಿಸಿದ ವೃದ್ಧಗೋಪಾಲಕ ಇತರ ಗೋಪಾಲಕರನ್ನು ಹೊಡೆದಾಟಕ್ಕೆ ಹುರಿದುಂಬಿಸಿ, ಮಹಾರಾಜನಿಗೆ ಆ ವೃತ್ತಾಂತವನ್ನು ತಿಳಿಸಲು ತೆರಳುತ್ತಾನೆ.]

ವಿರಾಟನು ತನ್ನ ಜನ್ಮನಕ್ಷತ್ರಕ್ಕೆ ಸಂಬಂಧಿಸಿದ ಕೆಲಸಗಳಲ್ಲಿ ವ್ಯಾಪೃತ ನಾಗಿರುವಾಗಲೇ, ಭಟನೊಬ್ಬನು ಅರಮನೆಗೆ ಬಂದು ಕೌರವರು ಯುದ್ಧ

ಸನ್ನದ್ಧರಾಗಿ ಗೋವುಗಳನ್ನು ಅಪಹರಿಸಿಕೊಂಡು ಹೋಗುತ್ತಿದ್ದಾರೆಂಬುದನ್ನು ಅರಿಕೆ ಮಾಡುತ್ತಾನೆ. ವಿರಾಟನು ತುಂಬ ಖೇದಗೊಂಡು, ಆದರೆ ಆ ಸನ್ನಿವೇಶದಲ್ಲಿ ತಾನು ಕೌರವರೊಡನೆ ಯುದ್ಧ ಮಾಡಲೇಬೇಕೆಂದು ನಿಶ್ಚಯಿಸಿ, ಅದಕ್ಕಾಗಿ ತನ್ನ ರಥಾದಿಗಳನ್ನು ಸಜ್ಜುಗೊಳಿಸಲು ಆಜ್ಞಾಪಿಸುತ್ತಾನೆ. ಅಲ್ಲದೆ, ತನ್ನ ಅರಮನೆಯಲ್ಲೇ ಇರುತ್ತಿದ್ದ ಭಗವಾನನು (ವೇಷ ಮರೆಯಿಸಿಕೊಂಡು ಅಜ್ಞಾತವಾಸದಲ್ಲಿದ್ದ ಯುಧಿಷ್ಠಿರನು) ಹಸ್ತಿನಾಪುರವಾಸಿಯಾಗಿದ್ದನಾದ್ದರಿಂದ ಅವನೊಡನೆ ಆಲೋಚಿಸುವುದಕ್ಕಾಗಿ ಅವನನ್ನು ಕರೆಯಿಸುತ್ತಾನೆ. ಅವನು ಬಂದಮೇಲೆ ಗೋಗ್ರಹಣ ವೃತ್ತಾಂತವನ್ನು ಅವನಿಗೆ ತಿಳಿಸಿ 'ಇನ್ನು ಕೌರವರು ಉಡುಗಿಹೋಗುತ್ತಾರೆ. ಶಕ್ತನೇ ಆಗಿದ್ದರೂ ಯುಧಿಷ್ಠಿರನೇನೋ ಸಹಿಸಿಕೊಂಡಿದ್ದಾನೆ. ನಾನು ಸಹಿಸುವುದಿಲ್ಲ' ಎಂದು ಹೇಳುತ್ತಾನೆ. ಅಷ್ಟರಲ್ಲಿ ರಣಭೂಮಿಯಿಂದ ಭಟ ಬಂದು—'ಕೌರವರ ಕಡೆ ದ್ರೋಣ, ಭೀಷ್ಮ, ಜಯದ್ರಥ, ಶಲ್ಯ, ಅಂಗರಾಜ, ಶಕುನಿ, ಕೃಪ ಮುಂತಾದವರೆಲ್ಲ ರಣರಂಗಕ್ಕೆ ಬಂದಿದ್ದಾರೆಂದು ತಿಳಿಸುತ್ತಾನೆ. ಅದನ್ನು ಕೇಳಿದಕೂಡಲೆ ಎದ್ದುನಿಂತು ಕೈಮುಗಿದುಕೊಂಡು 'ಏನು? ಪೂಜ್ಯನಾದ ಗಾಂಗೇಯನೂ ಬಂದಿದ್ದಾನೆಯೆ?' ಎಂದು ಕೇಳುತ್ತಾನೆ. ಯುಧಿಷ್ಠಿರನೂ ಭೀಷ್ಮನು ಬಂದಿರುವುದು ತಮ್ಮ ಅಜ್ಞಾತವಾಸದ ಅವಧಿ ತೀರಿತೆಂದು ತಿಳಿಸುವುದಕ್ಕಾಗಿರಬೇಕೆಂದು ಭಾವಿಸುತ್ತಾನೆ. ಅಷ್ಟರಲ್ಲಿ ಉತ್ತರಕುಮಾರನು ವಿರಾಟನ ರಥವನ್ನೇರಿ ಬೃಹನ್ನಳೆಯನ್ನು ಸಾರಥ್ಯಕ್ಕೆ ನೇಮಿಸಿಕೊಂಡು ಯುದ್ಧಕ್ಕೆ ಹೋಗಿಬಿಟ್ಟಿದ್ದಾನೆಂಬ ಸಮಾಚಾರ ಬರುತ್ತದೆ. ಪುನಃ ಸ್ವಲ್ಪವೇ ಹೊತ್ತಿನಲ್ಲಿ ಆ ರಥ ಶ್ಮಶಾನಾಭಿಮುಖವಾಗಿ ಹೋಯಿತೆಂದೂ, ಒಂದು ಮುಹೂರ್ತಕಾಲದ ಬಳಿಕ ರಣರಂಗಕ್ಕೆ ಬಂದು ಬಾಣಗಳ ಪ್ರವಾಹವನ್ನೇ ಹರಿಸಿಬಿಟ್ಟಿತೆಂದೂ, ಕೌರವರ ಕಡೆಯ ರಥಗಳೆಲ್ಲ ಸ್ತಂಭೀಭೂತವಾಗಿಬಿಟ್ಟುವೆಂದೂ, ಆ ಬಾಣಗಳ ಹೊಡೆತಕ್ಕೆ ಸಿಕ್ಕದ ಯೋಧನಾಗಲಿ ಕುದುರೆಯಾಗಲಿ ಉಳಿದಿಲ್ಲವೆಂದೂ, ಆ ಧನುರ್ಘೋಷವನ್ನು ಆಲಿಸಿದ ದ್ರೋಣನೂ ತನ್ನ ಧ್ವಜದಲ್ಲಿ ನೆಟ್ಟ ಬಾಣವನ್ನು ಗಮನಿಸಿದ ಭೀಷ್ಮನೂ ಯುದ್ಧದಿಂದ ಹಿಂದಿರುಗಿದುದಾಗಿಯೂ, ಎಲ್ಲರೂ ಅಪ್ರತಿಭರಾಗಿದ್ದರೂ ಅಭಿಮನ್ಯು ಮಾತ್ರ ಇನ್ನೂ ಯುದ್ಧಮಾಡುತ್ತಲೇ ಇದ್ದಾನೆಂದೂ ಸುದ್ದಿ ಬರುತ್ತದೆ. ಇದೆಲ್ಲ ತನ್ನ ಮಗ ಉತ್ತರನ ಪರಾಕ್ರಮದ ಫಲವೆಂದು ರಾಜನು ಹಿಗ್ಗುತ್ತಿರುವಾಗ ಭಟನೊಬ್ಬನು ಪುನಃ ಬಂದು ಯುದ್ಧ ಮುಗಿಯಿ

ತೆಂದೂ ಧಾರ್ತರಾಷ್ಟ್ರರು ಹಿಂದಿರುಗಿಹೋಗಿಬಿಟ್ಟರೆಂದೂ ತಿಳಿಸುತ್ತಾನೆ. ರಾಜನು ಬೃಹನ್ನಳೆಯನ್ನು ಕರೆಯಿಸಿ ಅವಳಿಂದಲೇ ಯುದ್ಧದ ವಿವರಗಳನ್ನು ತಿಳಿಯಲು ಯತ್ನಿಸುತ್ತಿರುವಷ್ಟರಲ್ಲಿ, ರಾಜನ ಅಡುಗೆಯವನು (ಭೀಮ) ಅಭಿಮನ್ಯುವಿನ ರಥದಹತ್ತಿರ ಹೋಗಿ ಕೈಯಿಂದಲೇ ಅದನ್ನು ತಡೆದು, ಅಭಿಮನ್ಯುವನ್ನು ರಥದಿಂದ ಇಳಿಸಿ ಹಿಡಿದುತಂದಿದ್ದಾನೆಂಬ ವಾರ್ತೆ ಬರುತ್ತದೆ. ಕೂಡಲೇ ವಿರಾಟನು ಅಭಿಮನ್ಯುವನ್ನು ರಾಜಾಸ್ಥಾನಕ್ಕೆ ಕರೆತರಲು ಬೃಹನ್ನಳೆಯನ್ನು ಕಳುಹಿಸುತ್ತಾನೆ. ಆಗ ಅಭಿಮನ್ಯುವನ್ನು ಭೀಮನೂ ಬೃಹನ್ನಳೆಯೂ ಒಟ್ಟಿಗೇ ಕೀಟಲೆ ಮಾಡುತ್ತಾರೆ. ರಾಜನೂ ಮುಂದೆ ತನ್ನ ಬಳಿಗೆ ಬಂದ ಅಭಿಮನ್ಯುವನ್ನು ಕೆಣಕಿ ಅವನ ದರ್ಪ, ಆತ್ಮಾಭಿಮಾನ, ಪಿತೃಭಕ್ತಿ ಮುಂತಾದುವುಗಳಿಂದ ತುಂಬಿದ ಮಾತುಗಳನ್ನು ಕೇಳಿ ಸಂತೋಷಿಸುತ್ತಾನೆ. ಅಷ್ಟರಲ್ಲಿ ಉತ್ತರಕುಮಾರನೂ ಆಸ್ಥಾನಕ್ಕೆ ಬಂದು ಬೃಹನ್ನಳೆಯೇ ಅರ್ಜುನ ಎಂದು ಸಾರುತ್ತಾನೆ. ವಿರಾಟನೂ ಅಭಿಮನ್ಯುವೂ ವಿಸ್ಮಿತರಾಗುತ್ತಾರೆ. ಯುದ್ಧದಲ್ಲಿ ಜಯಗಳಿಸಿದ ಅರ್ಜುನನು ತನ್ನ ಮಗಳಾದ ಉತ್ತರೆಯನ್ನು ಕಾಣಿಕೆಯಾಗಿ ಸ್ವೀಕರಿಸಬೇಕೆಂದು ವಿರಾಟನು ಒತ್ತಾಯಮಾಡುತ್ತಾನೆ. ವಿರಾಟನ ಅಂತಃಪುರದ ಸ್ತ್ರೀಯರೆಲ್ಲರೂ ತನಗೆ ಮಾತೃಸಮಾನರೆಂದೂ ಉತ್ತರೆಯನ್ನು ತನ್ನ ಮಗ ಅಭಿಮನ್ಯುವಿಗಾಗಿ ಸ್ವೀಕರಿಸುವುದಾಗಿಯೂ ಅರ್ಜುನ ತಿಳಿಸುತ್ತಾನೆ. ಪಿತಾಮಹನಿಗೆ ಈ ಸಮಾಚಾರವನ್ನು ಉತ್ತರಕುಮಾರನ ಮೂಲಕ ಕಳುಹಿಸುವ ತೀರ್ಮಾನವಾಗುತ್ತದೆ.

ಅಂಕ ೩ (ದೃಶ್ಯ— ಕೌರವರ ಶಿಬಿರ)

ಅಭಿಮನ್ಯುವಿನ ರಥವನ್ನು ಒಬ್ಬ ಸಾಮಾನ್ಯ ಪದಾತಿಯು ಕೈಗಳಿಂದಲೇ ತಡೆದು ನಿಲ್ಲಿಸಿ ಅಭಿಮನ್ಯುವನ್ನು ಅಪಹರಿಸಿಕೊಂಡು ಹೋಗಿಬಿಟ್ಟನೆಂದು ದೂತನೊಬ್ಬನು ಕೌರವರ ಶಿಬಿರಕ್ಕೆ ಬಂದು ತಿಳಿಸುತ್ತಾನೆ. ಕೂಡಲೇ ಭೀಷ್ಮನು 'ಇದು ಭೀಮಸೇನನ ಕೆಲಸವೇ; ಹಿಂದೆ ದ್ರೌಪದಿಯನ್ನು ಅಪಹರಿಸಲು ಯತ್ನಿಸಿದ ಜರಾಸಂಧನನ್ನೂ ಅವನು ಇದೇ ರೀತಿ ಸೋಲಿಸಿದ್ದ' ಎಂದು ಸಾರುತ್ತಾನೆ. ದ್ರೋಣನೂ ಅದನ್ನೇ ಪುಷ್ಟೀಕರಿಸಲು ಶಕುನಿ ಉದ್ರಿಕ್ತನಾಗಿ 'ಲೋಕದಲ್ಲಿ ಬೇರೆ ಬಲಿಷ್ಠರೇ ಇಲ್ಲವೆ? ನಿಮಗೆ ಜಗತ್ತೆಲ್ಲ ಪಾಂಡವಮಯವಾಗಿ ಕಾಣುತ್ತಿರುವಂತಿದೆ. ಹೀಗಾದರೆ ಉತ್ತರನನ್ನೂ ಅರ್ಜುನ

ನೆಂದೇ ಹೇಳಿಬಿಡಬಹುದು' ಎಂದು ಹೇಳುತ್ತಾನೆ. ಅದಕ್ಕೆ ಸರಿಯಾಗಿ ದೂತನೊಬ್ಬನು ಬಂದು ಭೀಷ್ಮನ ಧ್ವಜಕ್ಕೆ ನಾಟಿಕೊಂಡಿದ್ದ ಬಾಣವನ್ನು ತಂದು ಕೊಡುತ್ತಾನೆ. ಅದರ ಗರಿಯಮೇಲೆ ಅರ್ಜುನನ ಹೆಸರು ಸ್ಪಷ್ಟವಾಗಿ ಬರೆದಿರುವುದನ್ನು ಶಕುನಿ ತಾನೇ ಓದಿ ನೋಡಿದಮೇಲೂ, ಅದು ಅರ್ಜುನನೆಂಬ ಹೆಸರಿನ ಬೇರೆ ಯಾವನಮೋ ಇರಬೇಕೆಂದು ವಾದಿಸುತ್ತಾನೆ. ಆದರೆ ಅದೇ ಸಮಯಕ್ಕೆ ಉತ್ತರಕುಮಾರನು ಅಲ್ಲಿಗೆ ಬರುತ್ತಾನೆ. ಅಭಿಮನ್ಯುವಿನ ಮದುವೆ ಉತ್ತರೆಯೊಡನೆ ನಿಶ್ಚಿತವಾಗಿದೆಯೆಂದೂ ಅದನ್ನು ಎಲ್ಲಿ ನಡೆಸುವುದೆಂದು ತಿಳಿದುಬರುವಂತೆ ಯುಧಿಷ್ಠಿರನು ಕಳುಹಿಸಿರುವುದಾಗಿಯೂ ಹೇಳುತ್ತಾನೆ. ಇದರಿಂದ ಪಾಂಡವರ ಸಮಾಚಾರ ನಿರ್ವಿವಾದವಾಗಿ ಪಂಚರಾತ್ರಾವಧಿಯಲ್ಲೇ ತಿಳಿದುಬಂದಂತಾಗಿ ದುರ್ಯೋಧನನು ತನ್ನ ಮಾತಿನಂತೆ ರಾಜ್ಯಾರ್ಧವನ್ನು ಪಾಂಡವರಿಗೆ ಕೊಟ್ಟಿರುವುದಾಗಿ ತಿಳಿಸುತ್ತಾನೆ. ದ್ರೋಣನು 'ಉಭಯ ಕುಲಗಳ ಶ್ರೇಯಸ್ಸನ್ನೂ ಸಾಧಿಸಿ ನಾವು ಪ್ರಸನ್ನರಾದೆವು. ನಮ್ಮ ಈ ಭೂಮಿಯೆಲ್ಲವನ್ನೂ ರಾಜಸಿಂಹನು ಆಳಲಿ' ಎಂದು ಹಾರೈಸುತ್ತಾನೆ.

## II ಕಥಾಮೂಲ ಮತ್ತು ಭಾಸ ಅದರಲ್ಲಿ ಮಾಡಿರುವ ವ್ಯತ್ಯಾಸಗಳು

ಮಹಾಭಾರತದಲ್ಲಿ ವರ್ಣಿತವಾಗಿರುವ ಗೋಗ್ರಹಣ ಮತ್ತು ಅಭಿಮನ್ಯು-ಉತ್ತರಾ ವಿವಾಹ ಈ ಎರಡು ಪ್ರಸಂಗಗಳೇ 'ಪಂಚರಾತ್ರ' ನಾಟಕದ ಕಥೆಗೆ ಮೂಲ. ನಾಟಕದ ಕಥೆ ಆರಂಭದಿಂದ ಕೊನೆಯವರೆಗೂ ಕವಿಕಲ್ಪಿತ. ಗೋಗ್ರಹಣಕ್ಕೆ ಪೂರ್ವಭಾವಿಯಾಗಿ ದುರ್ಯೋಧನನು ಯಾಗ ಮಾಡಿದುದಾಗಿ ಮಹಾಭಾರತದಲ್ಲಿ ಉಕ್ತವಾಗಿಲ್ಲ. ಅಂತಹದೊಂದು ಯಾಗ ನಡೆದು, ಶ್ರೀಕೃಷ್ಣನ ಪ್ರತಿನಿಧಿಯಾಗಿ ಅಭಿಮನ್ಯು ಆ ಯಾಗಕ್ಕೆ ಹೋಗಿದ್ದನೆಂಬುದೂ, ಯಾಗ ಮುಗಿದಕೂಡಲೇ ಗೋಗ್ರಹಣ ಯುದ್ಧವಾರಂಭವಾಗಿ ಅಭಿಮನ್ಯು ಕೌರವರ ಕಡೆಯಿಂದ ಯುದ್ಧಮಾಡಿ ವಿರಾಟನ ಕಡೆಯವನಾದ (ಅಡುಗೆಯವನ ವೇಷದಲ್ಲಿ ಅಜ್ಞಾತವಾಸದಲ್ಲಿದ್ದ) ಭೀಮನಿಂದ ಸೆರೆಹಿಡಿಯಲ್ಪಟ್ಟನೆಂಬುದೂ, ಮುಂದೆ ಅಭಿಮನ್ಯುವನ್ನು ವಿರಾಟನ ಆಸ್ಥಾನಕ್ಕೆ ಕರೆಯಿಸಿ ಅವನೆದುರಿಗೇ ಪಾಂಡವರ ನಿಜಸ್ಥಿತಿ ಬಯಲಿಗೆ ಬಂದು, ಅರ್ಜುನನು ವಿರಾಟನ ಮಗಳಾದ ಉತ್ತರೆಯನ್ನು ಅಭಿಮನ್ಯುವಿಗಾಗಿ ಸ್ವೀಕರಿಸಿ ಅವರಿಬ್ಬರ ಮದುವೆ ನಿಶ್ಚಿತವಾಯಿತೆಂಬುದೂ ಕವಿಕಲ್ಪಿತವೇ ಆಗಿದ್ದರೂ ಮಹಾಭಾರತದ

ಮೂಲಕಥೆಗೆ ವಿರುದ್ಧವಾಗಿಲ್ಲ; ಹೊಂದಿಕೊಂಡಿರುವಂತೆಯೇ ಇದೆ. ಆದರೆ ಮುಖ್ಯ ಪ್ರಕರಣವಾದ 'ಪಂಚರಾತ್ರ'ದ ಷರತ್ತು ಮತ್ತು ಅದರಂತೆ ಪಾಂಡವರಿಗೆ ರಾಜ್ಯಾರ್ಧ ಪ್ರದಾನ ಇವೆರಡೂ ಮಹಾಭಾರತ ಯುದ್ಧಕ್ಕೇ ಅವಕಾಶವಿಲ್ಲದಂತೆ ಮಾಡುವ, ಮೂಲಕತೆಯ ಹೊರ ಕಟ್ಟನ್ನೇ ಪಲ್ಲಟಗೊಳಿಸುವ, ಅಂಶಗಳು.

ಪ್ರಾಯಃ ದುರ್ಯೋಧನನನ್ನು ಗುರುಭಕ್ತ, ಸತ್ಯಸಂಧ ಎಂದು ನಿರೂಪಿಸುವ ಉದ್ದೇಶದಿಂದ ಭಾಸ ಈ 'ಪಂಚರಾತ್ರ'ವನ್ನು ರಚಿಸಿರಬೇಕೆಂದು ತೋರುತ್ತದೆ. ಅದಕ್ಕಾಗಿ ದುರ್ಯೋಧನ ಒಂದು ಮಹಾಯಾಗ ಮಾಡಿದಂತೆ ನಿರೂಪಿಸಿ ಅದು ಮುಗಿದಮೇಲೆ ಅವನು ಆಚಾರ್ಯದಕ್ಷಿಣೆ ನೀಡುವ ಸಂದರ್ಭದಲ್ಲಿ, ಮೊದಲೇ ತಾನು ಅಪೇಕ್ಷಿಸಿದ್ದನ್ನು ಕೊಡುವುದಾಗಿ ಅವನಿಂದ ವಾಗ್ದಾನ ಪಡೆದ ಆಚಾರ್ಯ ದ್ರೋಣನಿಂದ 'ನೀನು ಪಾಂಡವರಿಗಾಗಿ ಅರ್ಧರಾಜ್ಯ ಕೊಡು. ಅದೇ ನನಗೆ ನೀನು ಕೊಡಬಹುದಾದ ಗುರುದಕ್ಷಿಣೆ' ಎಂದು ಹೇಳಿಸುತ್ತಾನೆ. ಶಕುನಿ ಮಧ್ಯೆ ಬಾರದಿದ್ದರೆ ದುರ್ಯೋಧನನು ಆ ಕೂಡಲೇ ದ್ರೋಣ ಅಪೇಕ್ಷಿಸಿದಂತೆ ಗುರುದಕ್ಷಿಣೆಯನ್ನು ಕೊಟ್ಟುಬಿಡುತ್ತಿದ್ದನೋ ಏನೋ ಎಂಬ ಭಾವನೆ ನಮಗೆಲ್ಲ ಬರುವ ರೀತಿಯಲ್ಲಿ ಮಹಾಭಾರತದ ಕಥೆಯ ಹಿನ್ನೆಲೆಯನ್ನೇ ದೂರ ಸರಿಸಿ, ಭಾಸ ಅವನ ಪಾತ್ರವನ್ನು ಚಿತ್ರಿಸಿದ್ದಾನೆ. ಶಕುನಿಯು ಮಧ್ಯೆ ಬಾಯಿ ಹಾಕಿದಾಗಲೂ ದುರ್ಯೋಧನ ಅವನಿಗೆ 'ಇದು ವಂಚನೆಯಾದರೂ ಸರಿ, ಏನೇ ಆದರೂ ಸರಿ, ನಾನು ಕೊಡುತ್ತೇನೆಂದು ಹೇಳಿರುವ ಮಾತು ಸುಳ್ಳಾಗಬಾರದು, ಹಾಗೆ ಮಾಡು' ಎಂದು ಹೇಳುತ್ತಾನೆ. ಕುತಂತ್ರಿಯಾದ ಶಕುನಿ ಪಂಚರಾತ್ರದ ಷರತ್ತನ್ನು ಮುಂದಿಡುತ್ತಾನೆ. ಅಂದರೆ ಐದು ದಿವಸಗಳಲ್ಲಿ ಅಜ್ಞಾತವಾಸದಲ್ಲಿರುವ ಪಾಂಡವರ ಸುಳಿವನ್ನು ಪತ್ತೆಮಾಡಿದರೆ ಅರ್ಧರಾಜ್ಯವನ್ನು ಅವರಿಗೆ ಕೊಡುವುದಾಗಿ ತಿಳಿಸುತ್ತಾನೆ. ಅದೇ ವೇಳೆಗೆ, ಕೀಚಕರನ್ನು ಯಾವನೋ ಒಬ್ಬ ನಿರಾಯುಧನಾಗಿ ಕೊಂದುಬಿಟ್ಟನೆಂಬ ವಾರ್ತೆ ವಿರಾಟನಗರದಿಂದ ಬಂದ ದೂತನಿಂದ ತಿಳಿಯುತ್ತದೆ. ಒಡನೆ ಭೀಷ್ಮನು ಆ ನಿರಾಯುಧನಾದ ವೀರ ಭೀಮನೇ ಎಂದು ಊಹಿಸಿ, ಪಂಚರಾತ್ರದ ಷರತ್ತನ್ನು ಒಪ್ಪಿಕೊಳ್ಳುವಂತೆ ದ್ರೋಣನಿಗೆ ಒತ್ತಾಯಮಾಡಿ, ವಿರಾಟನ ಗೋಗ್ರಹಣ ಮಾಡಲು ದುರ್ಯೋಧನನನ್ನು ಹುರಿದುಂಬಿಸುತ್ತಾನೆ ಯಾಗಕ್ಕಾಗಿ ನೆರೆದಿದ್ದ ರಾಜರೆಲ್ಲ ಯುದ್ಧಕ್ಕೆ ಹೋಗುತ್ತಾರೆ. ಅಭಿಮನ್ಯುವೂ ಹೋಗುತ್ತಾನೆ. ಕಲ್ಪಿತವಾದರೂ ಕಥೆ

ಎಷ್ಟು ಸಹಜವಾಗಿ ಮುಂದುವರಿಯುತ್ತಿದೆ, ನೋಡಿ. ವಿರಾಟನಕಡೆ ಬೃಹನ್ನಳೆಯನ್ನು ಸಾರಥಿಯನ್ನಾಗಿ ಹೊಂದಿ ಉತ್ತರ ಮಾತ್ರ ಯುದ್ಧಮಾಡುತ್ತಾನೆ. ವಿರಾಟನು ರಣರಂಗಕ್ಕೆ ಹೋಗುವುದೇ ಇಲ್ಲ. ಮಹಾಭಾರತದಲ್ಲಿ ವಿರಾಟ, ಭೀಮ ಎಲ್ಲರೂ ಮೊದಲೇ ಯುದ್ಧಕ್ಕೆ ತೆರಳಿದ್ದಂತೆಯೂ ಕೊನೆಯಲ್ಲಿ ಉತ್ತರ ಹೋದಂತೆಯೂ ಹೇಳಿದೆ. ಅಷ್ಟೇ ಅಲ್ಲದೆ ಮಹಾಭಾರತದಲ್ಲಿ ಗೋಗ್ರಹಣವಾದ ಮೂರು ನಾಲ್ಕು ದಿವಸಗಳ ನಂತರ, ಪಾಂಡವರ ಅಜ್ಞಾತವಾಸ ಮುಗಿದದ್ದು. ಇಲ್ಲಿ ಗೋಗ್ರಹಣದ ದಿವಸವೇ ಮುಗಿದುಹೋಗಿರುತ್ತದೆ. ಅಭಿಮನ್ಯು ಕೌರವರ ಕಡೆಯಿಂದ ಯುದ್ಧಮಾಡಿ ಸೆರೆಸಿಗುವುದೂ ಕೌರವರ ಶಿಬಿರದಲ್ಲಿ ಅಭಿಮನ್ಯು ಸೆರೆಸಿಕ್ಕ ವಿಚಾರದಲ್ಲಿ ಮಾತುಕಥೆ ನಡೆಯುತ್ತಾ, ಪ್ರಾಸಂಗಿಕವಾಗಿ ಅರ್ಜುನನೇ ತಮ್ಮೆಲ್ಲರನ್ನೂ ಸೋಲಿಸಿದವನೆಂದು, ಮೊದಲು ಊಹೆಯ ಮೇಲೂ ಅನಂತರ ಭೀಷ್ಮನ ಧ್ವಜಕ್ಕೆ ನಾಟಕೊಂಡಿದ್ದ 'ಅರ್ಜುನ' ನಾಮಾಂಕಿತ ಬಾಣದ ಆಧಾರದ ಮೇಲೂ, ಸಿದ್ಧಾಂತ ಮಾಡಲು ಭೀಷ್ಮ ದ್ರೋಣರು ಯತ್ನಿಸುತ್ತಿದ್ದಾಗ ಉತ್ತರನೇ ಅಭಿಮನ್ಯು-ಉತ್ತರೆಯರ ವಿವಾಹಕ್ಕೆ ಆಹ್ವಾನಿಸುವ ನೆಪದಿಂದ ಬಂದು ಪಾಂಡವರೆಲ್ಲರೂ ವಿರಾಟನಗರದಲ್ಲಿರುವ ಅಂಶವನ್ನು ಬಹಿರಂಗಪಡಿಸುವುದೂ, ಪಂಚರಾತ್ರದ ಅವಧಿಯೊಳಗೇ ಇದೆಲ್ಲ ನಡೆದುಹೋಗಿದ್ದುದರಿಂದ ಮರುಮಾತಿಲ್ಲದೆ ದುರ್ಯೋಧನ ಅರ್ಧ ರಾಜ್ಯವನ್ನು ಪಾಂಡವರಿಗೆ ಬಿಟ್ಟುಕೊಟ್ಟು ತನ್ನ ಸತ್ಯಸಂಧತೆಯನ್ನು ಕಾಪಾಡಿಕೊಳ್ಳುವುದೂ ಕವಿಯು ಸ್ವಂತವಾಗಿ ಹೆಣೆದಿರುವ ಸ್ವಾರಸ್ಯಮಯ ಕಥಾಸರಣಿ. ಇದಲ್ಲದೆ ನಾಟಕ ರಂಜಕವಾಗುವಂತೆ ಅಭಿಮನ್ಯು-ಬೃಹನ್ನಳೆ-ಭೀಮ ಇವರ ನಡುವೆ ನಡೆಯುವ ಸಂಭಾಷಣೆಯಂತು ಕಲ್ಪಿತವೆಂದು ಹೇಳಲಸಾಧ್ಯವಾಗುವಷ್ಟು ಸಹಜವಾಗಿ ಮೂಡಿಬಂದಿದೆ. ಭಾಸನ ವಸ್ತುರಚನಾಕೌಶಲ ಅಂತಹುದು.

ಈ ರೀತಿ ಮೂಲ ಭಾರತದ ಕಥೆಯನ್ನು ಬದಿಗೊತ್ತಿ ತನ್ನದೇ ಆದ ರೀತಿಯಲ್ಲಿ ಕೊನೆಗೊಳ್ಳುವ ಈ 'ಪಂಚರಾತ್ರ'ವನ್ನು ಸ್ವತಂತ್ರ ರೂಪದಲ್ಲಿ ಭಾಸ ರಚಿಸಿದ್ದರೂ, ವ್ಯಾಸನ ರಚನೆಯ ವಿಷಯದಲ್ಲಿ ಭಾಸನ ಗೌರವ ಅಪಾರ. ವ್ಯಾಸನು ಪ್ರಯೋಗಿಸಿರುವ ಅನೇಕ ಪದ, ಪದಸಮೂಹ, ವಾಕ್ಯ, ವರ್ಣನೆ ಮತ್ತು ಭಾವಗಳನ್ನು ಈ ನಾಟಕದಲ್ಲಿ ಉದ್ದಕ್ಕೂ ಬಳಸಿದ್ದಾನೆ. ಈ ನಾಟಕದಲ್ಲಿ ಮಹಾಭಾರತದ ಕಥೆಯನ್ನು ಯುದ್ಧವಿಲ್ಲದೆಯೇ ಸುಖಾಂತವಾಗಿ

ನಿರೂಪಿಸಿದ್ದರೂ, ತನ್ನ ಊರುಭಂಗ ಎಂಬ ಏಕಾಂಕದಲ್ಲಿ ದುರ್ಯೋಧನ-ಭೀಮರ ನಡುವೆ ಗಧಾಯುದ್ಧವಾಗಿ ದುರ್ಯೋಧನ ಹತನಾದುದನ್ನು ಚಿತ್ರಿಸಿ ವ್ಯಾಸನ ಮಹಾಭಾರತ ಕಥೆಯ ಮೇಲಿನ ತನ್ನ ಆದರ ಮೆಚ್ಚುಗೆಯನ್ನು ಖಚಿತ ಪಡಿಸಿದ್ದಾನೆ.

### III ನಾಟಕದ ಶೀರ್ಷಿಕೆ

ನಾಟಕಗಳಿಗೆ ಹೆಸರಿಡುವುದರಲ್ಲಿ ಸಾಮಾನ್ಯವಾಗಿ ಮೂರು ಕಲ್ಪಗಳಿವೆ. —೧. ಭಾಸನ ಚಾರುದತ್ತ, ಹರ್ಷನ ರತ್ನಾವಳೀ ಅಥವಾ ಪ್ರಿಯದರ್ಶಿಕೆಯಲ್ಲಿರುವಂತೆ ನಾಯಕನ ಅಥವಾ ನಾಯಿಕೆಯ ಹೆಸರನ್ನೇ ನಾಟಕಕ್ಕೂ ಇಡುವುದು ಸರ್ವಸಾಧಾರಣವಾದ ಕಲ್ಪ. ೨. ನಾಯಕ ಅಥವಾ ನಾಯಿಕೆಯ ಹೆಸರಿನ ಜತೆಗೆ ನಾಟಕದ ವೈಶಿಷ್ಟ್ಯವೆನ್ನಿಸಿಕೊಳ್ಳಲರ್ಹವಾದ ದೃಶ್ಯ ಅಥವಾ ಸನ್ನಿವೇಶವನ್ನು ಜೋಡಿಸಿ 'ಅಭಿಜ್ಞಾನ ಶಾಕುಂತಲ' ಎಂಬಂತಹ ಹೆಸರನ್ನಿಡುವುದು ಮಧ್ಯಮ ಕಲ್ಪ. ೩. ನಾಟಕ ಕರ್ತೃವಿನ ಕೈವಾಡವೇ ನಾಟಕದಲ್ಲಿ ಮೊದಲಿನಿಂದ ಕೊನೆಯವರೆಗೂ ಇದ್ದು. ನಾಟಕದ ಎಲ್ಲ ದೃಶ್ಯ ಅಥವಾ ಸನ್ನಿವೇಶಗಳೂ ಒಂದಕ್ಕಿಂತ ಒಂದು ಸ್ವಾರಸ್ಯವಾಗಿರುವಾಗ ಅಂತಹ ದೃಶ್ಯಗಳಲ್ಲಿ ನಾಟಕ ಕರ್ತೃವಿನ ಮೆಚ್ಚುಗೆಗೆ ಪಾತ್ರವಾದ ಸನ್ನಿವೇಶವನ್ನೇ, 'ಮೃಚ್ಛಕಟಿಕ' ದಲ್ಲಿರುವಂತೆ, ನಾಟಕದ ಹೆಸರನ್ನಾಗಿಡುವುದು ಉತ್ತಮಕಲ್ಪ. 'ಪಂಚರಾತ್ರ' ಎಂಬ ಶೀರ್ಷಿಕೆಯೂ ಈ ಉತ್ತಮ ಕಲ್ಪಕ್ಕೇ ಸೇರಿದುದು.

ಪ್ರಸಕ್ತನಾಟಕದಲ್ಲಿ ವಸ್ತುರಚನೆಯೆಲ್ಲವೂ ಕವಿಕಲ್ಪಿತವಾದ 'ಪಂಚರಾತ್ರ'ದ ಷರತ್ತಿನ ಮೇಲೆ ನಿಂತಿದೆ. ಈ ಷರತ್ತಿನ ಆಧಾರದ ಮೇಲೆಯೇ ದುರ್ಯೋಧನನನ್ನು ಗುರುಭಕ್ತ, ಸತ್ಯಸಂಧ ಎಂದು ಭಾಸ ನಿರೂಪಿಸಿರುವುದು. ಪಾಂಡವ ಕೌರವ ದ್ವೇಷವೂ ಮಹಾಭಾರತದಲ್ಲಿರುವಂತೆ ಯುದ್ಧದಲ್ಲಿ ಪರ್ಯವಸಾನಗೊಳ್ಳದೆ, ರಾಜ್ಯಸಂವಿಭಾಗದಿಂದ ಶಾಂತವಾಗಿ, ಎಲ್ಲರೂ ಪ್ರಸನ್ನರಾಗಿ ಉಭಯಕುಲಗಳ ವೃದ್ಧಿಗೆ ಕಾರಣವಾಗುವುದೂ ಈ 'ಪಂಚರಾತ್ರ'ವೇ. ಈ 'ಪಂಚರಾತ್ರ' ಶಬ್ದವನ್ನು ಭಾಸನು ಪುನಃ ಪುನಃ ನಾಟಕದ ಉದ್ದಕ್ಕೂ ಐದಾರುಬಾರಿ ಪ್ರಯೋಗಿಸಿ, ಈ ತನ್ನ ಸುಂದರವಾದ ಕಲ್ಪನೆಯಮೇಲೆ ತನಗೇ ಇದ್ದ ಅತಿಶಯವಾದ ಅಭಿಮಾನವನ್ನು ತೋರಿಸಿಕೊಂಡಿದ್ದಾನೆ. ನಾಟಕ ನೋಡಿದಮೇಲೆ ಅಥವಾ ಓದಿದಮೇಲೆ ಪ್ರೇಕ್ಷಕ ವಾಚಕರಿಗೂ ಕವಿಯ ಈ

ಹೊಸ ಕಲ್ಪನೆಯು ಅಚ್ಚುಮೆಚ್ಚಾಗುವುದರಲ್ಲಿ ಸಂಶಯವಿಲ್ಲ. ಅಂತಹ ಕಲ್ಪನೆಯನ್ನೇ ನಾಟಕದ ಶೀರ್ಷಿಕೆಯನ್ನಾಗಿಟ್ಟಿರುವುದು ರತ್ನವನ್ನು ಕುಂದಣ ವಲ್ಲಿ ಳವಡಿಸಿದಂತೆ ಮನೋಹರವಾಗಿದೆ.

## IV ಪಂಚರಾತ್ರದ ವೈಶಿಷ್ಟ್ಯ

ಪಂಚರಾತ್ರದ ಅತಿ ಮುಖ್ಯ ವೈಶಿಷ್ಟ್ಯವೆಂದರೆ ಆದರಲ್ಲಿ ಸ್ತ್ರೀಪಾತ್ರಗಳೇ ಇಲ್ಲದಿರುವುದು. ಬೃಹನ್ನಳೆಯು ರಂಗಮಂಚದಮೇಲೆ ಬರುತ್ತಾಳಾದರೂ ಅರ್ಜುನನೇ ಆ ವೇಷದಲ್ಲಿದ್ದಾನೆಂಬುದು ಅಲ್ಲೇ ಪ್ರಕಟವಾಗಿಬಿಡುತ್ತದೆ. ಸಾಧಾರಣವಾಗಿ ಎಲ್ಲ ನಾಟಕಗಳಲ್ಲೂ ಬರುವ ಪ್ರತೀಹಾರಿ (ಸ್ತ್ರೀ)ಯೂ ಇಲ್ಲಿಲ್ಲ. ಅವಳಿಗೆ ಬದಲಾಗಿ ಭಟ ಬರುತ್ತಾನೆ. ಎರಡನೆಯ ಅಂಕದಲ್ಲಿ ಗೋಪಾಲಕರೊಡನೆ ಬರುವ ಗೋಪದಾರಿಕೆಯರು ಸಂಖ್ಯಾ ಪೂರಣಕ್ಕೆ ಮಾತ್ರ. ಸಂಸ್ಕೃತದಲ್ಲಿ ಸ್ತ್ರೀ ಪಾತ್ರಗಳಿಲ್ಲದ ದೃಶ್ಯಕಾವ್ಯಗಳು ತುಂಬ ವಿರಳ. ವಿಶಾಖದತ್ತನ ಮುದ್ರರಾಕ್ಷಸವನ್ನು ಇಂತಹವುಗಳಲ್ಲಿ ಒಂದೆಂದು ಹೇಳಬಹುದು. ಅಲ್ಲೂ ಚಂದನದಾಸನ ಹೆಂಡತಿ ಒಂದು ಕ್ಷಣಕಾಲ ಮಾತ್ರ ರಂಗಮಂಚದಮೇಲೆ ಕಾಣಿಸಿಕೊಳ್ಳುತ್ತಾಳೆ. ಭಾಸನ ದೂತವಾಕ್ಯ, ಕರ್ಣಭಾರಗಳಲ್ಲಿ ಮಾತ್ರ ಸ್ತ್ರೀಪಾತ್ರ ಪ್ರವೇಶವೇ ಇಲ್ಲ.

ಪಂಚರಾತ್ರವನ್ನು ಕೆಲವರು ಸಮವಾಕಾರವೆಂದೂ ಇನ್ನು ಕೆಲವರು ವ್ಯಾಯೋಗವೆಂದೂ ಹೇಳುತ್ತಾರೆ. ಸಮವಾಕಾರದಲ್ಲಿರಬೇಕಾದ ದೇವದಾನವರೂ ಶೃಂಗಾರರಸವೂ ಇಲ್ಲಿಲ್ಲ. ವ್ಯಾಯೋಗ ಏಕಾಂಕ ದೃಶ್ಯಕಾವ್ಯ, ಸುಲಭವಾದ ಪದ್ಯಗಳಿಂದ ಕೂಡಿರಬೇಕು. ಪಂಚರಾತ್ರದಲ್ಲಿ ಮೂರು ಅಂಕಗಳಿವೆ. ಪದ್ಯಗಳು ಸುಲಭವೆನ್ನುವಂತಿಲ್ಲ. ಆದರೆ ಇದರ ನಾಂದೀ ಶ್ಲೋಕದಲ್ಲಿ ಹನ್ನೆರಡು ಹೆಸರುಗಳು ಬರುತ್ತವೆ. ಸಮವಾಕಾರದಲ್ಲಿ ಮಾತ್ರ ಹನ್ನೆರಡು ವೀರರಿಗೆ ಸ್ಥಾನವಿರುವುದು. ಭಾಸನ ನಾಟಕಗಳಿಗೆ ನಾಟ್ಯಶಾಸ್ತ್ರನಿಯಮಗಳು ಅನ್ವಯಿಸುವುದಿಲ್ಲವೆಂದು ಹಿಂದೆಯೇ ಹೇಳಿ ಆಗಿದೆ. ಆದ್ದರಿಂದ ಅವನ ಕೃತಿಗಳು ನಾಟ್ಯಶಾಸ್ತ್ರದಲ್ಲಿ ಉಕ್ತವಾಗಿರುವ ಯಾವ ಜಾತಿಗೆ ಸೇರಿದ್ದುವೆಂದು ವಿಚಾರಿಸುವುದೂ ಅಸಂಗತವಾಗುತ್ತದೆನ್ನದೆ ವಿಧಿಯಿಲ್ಲ.

ಪಂಚರಾತ್ರ ಬಹುಮುಖವಾದ ವೀರರಸ ಪ್ರಧಾನವಾದದ್ದು. ಇಲ್ಲಿ ದುರ್ಯೋಧನ ಧರ್ಮವೀರ, ದ್ರೋಣ ದಯಾವೀರ, ಇತರರು ಯುದ್ಧವೀರರು. ಹಾಸ್ಯ ವಾತ್ಸಲ್ಯ ರಸಗಳು ವೀರರಸಕ್ಕೆ ಪೋಷಕವಾಗಿ ಬಂದಿವೆ.

## V ಪಾತ್ರ ಪರಿಚಯ

ದುರ್ಯೋಧನ—ಪಂಚರಾತ್ರದಲ್ಲಿ ಚಿತ್ರಿತನಾಗಿರುವ ದುರ್ಯೋಧನ ಉದಾರಿ, ಧರ್ಮಬುದ್ಧಿಯ ರಾಜ. ಅವನು ಮಾಡಿದ ಯಜ್ಞ, ಅದರ ಸಮೃದ್ಧಿ, ಆಗ ಧನ ಧಾನ್ಯ ಗೋವುಗಳೇ ಮುಂತಾದುವುಗಳನ್ನು ಧಾರಾಳವಾಗಿ ದಾನಮಾಡಿ ಬ್ರಾಹ್ಮಣ ಶ್ರೇಷ್ಠರನ್ನು ತೃಪ್ತಿಗೊಳಿಸಿದ ರೀತಿ, ಇವು ಅವನ ಕೀರ್ತಿಯನ್ನು ದಿಗಂತವ್ಯಾಪಿಯನ್ನಾಗಿ ಮಾತ್ರವಲ್ಲ, ದೇವಲೋಕವನ್ನೂ ಮುಟ್ಟುವಂತೆ ಮಾಡುತ್ತವೆ. ಸತ್ಕಾರ್ಯವೊಂದನ್ನು ಅನುಷ್ಠಿಸಿದ ಸಂತೃಪ್ತಿಯಿಂದಲೂ ಆಗ ತನ್ನ ಸುತ್ತಮುತ್ತ ನೆರದಿದ್ದ ಜನರ ಸಂತೋಷ ಸಮಾಧಾನಗಳ ಅನುಭವದಿಂದಲೂ ದುರ್ಯೋಧನ 'ಇದೇ ಸ್ವರ್ಗ; ಸ್ವರ್ಗ ಪರೋಕ್ಷವಲ್ಲ; ಸತ್ತಮೇಲೆಯೇ ಸ್ವರ್ಗ ಲಭ್ಯ ಎಂಬುದು ಸುಳ್ಳು. ಇಲ್ಲೇ, ಈ ಲೋಕದಲ್ಲೇ ಅದು ಬಹುಗುಣವಾಗಿ ಫಲಿಸುತ್ತದೆ' ಎನ್ನುತ್ತಾನೆ. ಯಜ್ಞವೆಲ್ಲ ಸಾಂಗವಾಗಿ ನಿರ್ವಿಘ್ನವಾಗಿ ನೆರವೇರಿದಮೇಲೆ ಕೃತಕೃತ್ಯತೆಯ ಸದ್ಭಾವನೆಯಿಂದ ಪ್ರೇರಿತನಾಗಿ, ಆಚಾರ್ಯದಕ್ಷಿಣೆಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸುವ ಸಮಯದಲ್ಲಿ ದ್ರೋಣನನ್ನು 'ಧರ್ಮೇ, ಧನುಷಿ ಚ ಆಚಾರ್ಯ' ಎಂದು ಸಂಬೋಧಿಸುತ್ತಾನೆ. ದ್ರೋಣ ಧನುರಾಚಾರ್ಯನೆಂಬುದು ಎಲ್ಲರಿಗೂ ತಿಳಿದ ವಿಷಯ. ಆದರೆ 'ಧರ್ಮ'ವನ್ನು ತನಗೆ ದ್ರೋಣ ಬೋಧಿಸಿದ್ದನೆಂದು ದುರ್ಯೋಧನನೇ ಇಲ್ಲಿ ಹೇಳಿರುವುದು ಗಮನಾರ್ಹ.

ದುರ್ಯೋಧನ ಸ್ವಭಾವತಃ ಒಳ್ಳೆಯವನು; ದ್ರೋಣನಿಂದ ಧರ್ಮಬೋಧೆ ಪಡೆದು ಧರ್ಮಮಾರ್ಗದಲ್ಲೇ ನಡೆದುಕೊಳ್ಳಬೇಕೆಂಬ ಆಸೆಯಿಂದಿದ್ದವನು. ಆದರೆ, ದಾಕ್ಷಿಣ್ಯಪರನಾದ ಅವನನ್ನು ಅವನ ಸೋದರಮಾವನಾದ ಶಕುನಿ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದನು. ಶಕುನಿಯದು ಯಾವಾಗಲೂ ಋಜುಮಾರ್ಗವಲ್ಲ. ಪಾಂಡವರ ವಿಷಯದಲ್ಲಂತು ಅವನದು ಅಗಾಧವಾದ ದ್ವೇಷ. ಇದರಿಂದಾಗಿ ಸದಾ ದುರ್ಯೋಧನನ ಸಮೀಪದಲ್ಲೇ ಇದ್ದುಕೊಂಡು, ಅವನು ತನ್ನ ಅಭಿಪ್ರಾಯಕ್ಕನುಗುಣವಾಗಿಯೇ ನಡೆಯುವಂತೆ ನೋಡಿಕೊಳ್ಳುತ್ತಾನೆ. ಯಜ್ಞಾಂತ್ಯದಲ್ಲಿ ಆಚಾರ್ಯದಕ್ಷಿಣೆಯನ್ನು ಕೊಡುವ ಸಂದರ್ಭದಲ್ಲೂ ಅಷ್ಟೆ. ದ್ರೋಣನು ದುರ್ಯೋಧನನಿಗೆ 'ನಿನ್ನ ರಾಜ್ಯದಲ್ಲಿ ಅರ್ಧಭಾಗವನ್ನು ಪಾಂಡವರಿಗೆ ಕೊಡು. ಇದೇ ನೀನು ನನಗೆ ನೀಡಬಹುದಾದ ಆಚಾರ್ಯದಕ್ಷಿಣೆ' ಎಂದಾಗ,

ಶಕುನಿ ಮಧ್ಯೆ ಬಾಯಿಹಾಕಿ 'ಇದು ಧರ್ಮದ ಹೆಸರಿನಲ್ಲಿ ಮಾಡುತ್ತಿರುವ ಶಿಷ್ಯದ್ರೋಹ' ಎಂದು ಮುಂತಾಗಿ ಕೂಗಾಡದಿದ್ದರೆ, ದುರ್ಯೋಧನ ಮರು ಮಾತಿಲ್ಲದೆ ರಾಜ್ಯಾರ್ಧವನ್ನು ಕೊಟ್ಟುಬಿಡುತ್ತಿದ್ದನೆಂದು ಧಾರಾಳವಾಗಿ ಹೇಳ ಬಹುದು. ಸೋದರಮಾವನೆಂಬ ಗೌರವದಿಂದಲೂ, ಆಪ್ತನೆಂಬ ಭಾವನೆ ಯಿಂದಲೂ ದುರ್ಯೋಧನ ಶಕುನಿಯ ಸಲಹೆ ಕೇಳುವಾಗಲೂ 'ನಾನು ಕೊಟ್ಟ ಮಾತು ಉಳಿಯುವಂತಾಗಬೇಕು' ಎಂದು ಸ್ಪಷ್ಟವಾಗಿ ಹೇಳಿಬಿಡುತ್ತಾನೆ. ಆದ್ದರಿಂದಲೇ ಶಕುನಿ 'ಪಂಚರಾತ್ರ'ದ ಷರತ್ತನ್ನು ಮುಂದಿಡುವುದು. "ಧರ್ಮದಲ್ಲಿ ಮೋಸಕ್ಕೆ ಅವಕಾಶವಿಲ್ಲ. ಕೊಟ್ಟ ಮಾತನ್ನು ನಡೆಸದಿರಲು ಹೂಡಿರುವ ಮೋಸದ ಉಪಾಯ ಈ ಪಂಚರಾತ್ರದ ಷರತ್ತು" ಎಂದು ವಾದಿಸಿದ ಭೀಷ್ಮದ್ರೋಣರ ಮಾತು ಶಕುನಿಯ ಹಿಡಿತದಲ್ಲಿದ್ದ ದುರ್ಯೋಧನನ ಮೇಲೆ ಸಾಕಷ್ಟು ಪ್ರಭಾವ ಬೀರಿದರೂ ಪರಿಣಾಮಕಾರಿಯಾಗುವುದಿಲ್ಲ. ದುಷ್ಟ ಶಕುನಿಯ ಸಹವಾಸದೋಷದಿಂದ ದುರ್ಯೋಧನನೂ ಸಾಮಾನ್ಯವಾಗಿ ದುಷ್ಟನಾಗಿಯೇ ತೋರುತ್ತಿದ್ದನೆಂಬುದಕ್ಕೆ ಇದೊಂದು ನಿದರ್ಶನ. ಆದರೂ ಮುಂದೆ ಉತ್ತರಕುಮಾರ ಕೌರವಶಿಬಿರಕ್ಕೆ ಬಂದು ಅಭಿಮನ್ಯು-ಉತ್ತರೆಯರ ವಿವಾಹ ಪ್ರಸ್ತಾಪದ ಮೂಲಕ ಪಾಂಡವರು ವಿರಾಟನಗರದಲ್ಲಿರುವ ಅಂಶ ವನ್ನು ಹೊರಗೆಡಹಿದಾಗ "ಪಂಚರಾತ್ರದ ಅವಧಿ ಇನ್ನೂ ಮುಗಿದಿಲ್ಲ. ಹಿಂದೆ ಆಡಿದ್ದಂತೆ ರಾಜ್ಯಾರ್ಧವನ್ನು ಪಾಂಡವರಿಗೆ ಕೊಡು" ಎಂದು ದ್ರೋಣ ಕೇಳು ತ್ತಿದ್ದಂತೆಯೇ 'ಇಗೋ ಕೊಟ್ಟೆ' ಎಂದು ಆ ಕೂಡಲೇ ಕಾರ್ಯೋನ್ಮುಖನಾಗುವ ದುರ್ಯೋಧನನ ಸತ್ಯಸಂಧತೆ ಸ್ತೋತ್ರಾರ್ಹವಾದುದು. ಆಗ ಅವನಾಡುವ 'ಯಾಚಿತವಾದ ಭೈಕ್ಷ್ಯದ ವಿಚಾರದಲ್ಲೂ ಸತ್ಯ ನಿಲ್ಲುವುದಾದರೆ, ಮಾನವ ರೆಲ್ಲರೂ (ಪ್ರತಿಷ್ಠಿತರಾಗಿ) ನಿಲ್ಲುತ್ತಾರೆ' ಎನ್ನುವ ಮಾತು ಸ್ವರ್ಣಾಕ್ಷರಗಳಿಂದ ಬರೆಯಲರ್ಹವಾದುದು.

ದುರ್ಯೋಧನನದು ವಿಶಾಲ ಮನೋಭಾವ. ಹಿರಿಯರ ಮನಸ್ತಾಪಕ್ಕಾಗಿ ಮಕ್ಕಳಮೇಲೆ ಸೇಡುತೋರಿಸುವುದು ತಪ್ಪೆಂದು ಹೇಳುವುದು ಮಾತ್ರವಲ್ಲದೆ ಅಭಿಮನ್ಯುವನ್ನು ತುಂಬ ಆತ್ಮೀಯತೆಯಿಂದ ತನ್ನ ಮಗನೆಂದೇ ಭಾವಿಸು ತ್ತಾನೆ. ಅವನು ತನಗಾಗಿ ತನ್ನ ಕಡೆಯಿಂದ ಯುದ್ಧಮಾಡಿ ಬಂಧಿತನಾದ ನೆಂದು ಕೇಳಿದಾಗಂತು ತಾನು ಕರ್ತವ್ಯಲೋಪಮಾಡಿದವನಂತೆ ಪೇಚಾಡುತ್ತಾ ಅವನನ್ನು ಬಂಧವಿಮುಕ್ತನನ್ನಾಗಿ ಮಾಡಲು ತಾನೇ ಮುಂದಾಗ ಬಯಸು

ತ್ತಾನೆ. ಯಜ್ಞಾಂತ್ಯದಲ್ಲಿ ಅತಿಥಿಗಳಾಗಿ ಬಂದಿದ್ದವರೊಬ್ಬೊಬ್ಬರನ್ನೂ ಆದರಿಸು ವಾಗಲೂ, ಕೃಷ್ಣನ ಪ್ರತಿನಿಧಿಯಾಗಿ ಬಂದಿದ್ದ ಅಭಿಮನ್ಯುವನ್ನು 'ಬಾ ಬಾ ವತ್ಸ' ಎಂದು ಹೇಳಿ ಬಾಯಿತುಂಬ ಹರಸುವಷ್ಟರಲ್ಲಿ ಶಕುನಿ ಜರಾಸಂಧನ ಮಗನನ್ನು ಮುಂದೆ ನಿಲ್ಲಿಸಿಬಿಟ್ಟರೂ, ದುರ್ಯೋಧನನ ಹಿರಿಮೆ ಎಲ್ಲರ ಗಮ ನಕ್ಕೂ ಬಂದೇಬರುತ್ತದೆ. ಈ ನಾಟಕದ ಯಾವ ಭಾಗದಲ್ಲೂ, ಸನ್ನಿವೇಶ ದಲ್ಲೂ, ದುರ್ಯೋಧನ ಪಾಂಡವರ ಬಗ್ಗೆ ಒಂದು ಕೆಟ್ಟಮಾತನ್ನೂ ಆಡಿಲ್ಲ ದಿರುವುದು ಅವನ ಘನತೆಯನ್ನು ಹೆಚ್ಚಿಸುತ್ತದೆ. ಇದರಿಂದ ಅವನ ಗುರು ಭಕ್ತಿಗೂ ಸತ್ಯಸಂಧತೆಗೂ ಸ್ವಾಭಿಮಾನಕ್ಕೂ ಮೆರಗುಕೊಟ್ಟಂತಾಗಿದೆ.

ದ್ರೋಣ—ಜನ್ಮತಃ ಬ್ರಾಹ್ಮಣನಾದರೂ ದ್ರೋಣ ಮಹಾ ಪರಾಕ್ರಮಿಯಾದ ಯೋಧ; ಸರ್ವ ಕ್ಷತ್ರಾಚಾರ್ಯ. ದುರ್ಯೋಧನನು ದ್ರೋಣ ನನ್ನು 'ಧರ್ಮೇ ಧನುಷಿ ಚ ಆಚಾರ್ಯ' ಎಂದು ಸಂಬೋಧಿಸಿ, ದ್ರೋಣ ಧನುರ್ವಿದ್ಯೆಯಲ್ಲಿ ಮಾತ್ರ ಆಚಾರ್ಯನಾಗಿರಲಿಲ್ಲ, ಧನುರ್ವಿದ್ಯೆಯ ಜತೆಯಲ್ಲೇ ಧರ್ಮಬೋಧೆಯನ್ನೂ ಮಾಡಿ ಅಪ್ರತಿಮ ಆಚಾರ್ಯನಾಗಿದ್ದನೆಂಬುದನ್ನು ಲೋಕಕ್ಕೆ ತಿಳಿಸುತ್ತಾನೆ. ಭೀಷ್ಮನೂ ಕೂಡ ದ್ರೋಣನ ಹಿರಿಮೆಯನ್ನು ಎತ್ತಿಹಿಡಿದು, ಯಜ್ಞಾಂತ್ಯದಲ್ಲಿ ಶಿಷ್ಯನಾದ ದುರ್ಯೋಧನನ ಪ್ರಥಮ ಪ್ರಣಾಮ ಆಚಾರ್ಯ ದ್ರೋಣನಿಗೇ ಸಲ್ಲತಕ್ಕದ್ದೆಂದು ನಿರೂಪಿಸುತ್ತಾನೆ.

ಐಹಿಕವಾದ ಸುಖಸಂಪತ್ತುಗಳಮೇಲೆ ದ್ರೋಣನಿಗೆ ಯಾವ ಅಭಿ ಮಾನ ಅಪೇಕ್ಷೆಗಳೂ ಇದ್ದಂತಿಲ್ಲ. ತನ್ನ ಶಿಷ್ಯರೆಲ್ಲ ಧರ್ಮಿಷ್ಠರಾಗಿರಬೇಕು. ಎಲ್ಲೆಲ್ಲೂ ಸುಖಶಾಂತಿ ನೆಲಸಬೇಕು-ಎಂಬುದೇ ಅವನ ಉತ್ಕಟಾಭಿಲಾಷೆ ಯಾಗಿತ್ತೆಂದು ಹೇಳಬಹುದು. ಕೌರವ-ಪಾಂಡವರ ಮಧ್ಯೆ ಬೆಳೆಯುತ್ತಿದ್ದ ದ್ವೇಷವನ್ನು ಹೇಗಾದರೂ ಕೊನೆಗಾಣಿಸಿ ಇಬ್ಬರೂ ತಮ್ಮಿಷ್ಟಕ್ಕೆ ತಾವು ರಾಜ್ಯ ಭಾರ ಮಾಡುವಂತೆ ಮಾಡಲು ಸದಾ ತವಕಿಸುತ್ತಿದ್ದ ದ್ರೋಣನಿಗೆ ದುರ್ಯೋ ಧನನು ಯಾಗಮಾಡಿ ಉದಾರವಾದ ದ್ರವ್ಯ ತ್ಯಾಗದಿಂದ ಎಲ್ಲರ ಪ್ರಶಂಸೆಗೂ ಪಾತ್ರನಾದಾಗ ಅಪಾರ ಸಂತೋಷವಾಗಿದ್ದಿರಬೇಕು. ಅದೇ ಸಂದರ್ಭದಲ್ಲಿ, ದುರ್ಯೋಧನನು ತನಗೆ ಆಚಾರ್ಯದಕ್ಷಿಣೆ ಕೊಡಲು ಮುಂದೆ ಬಂದು, 'ಧರ್ಮೇ ಧನುಷಿ ಚ ಆಚಾರ್ಯ' ಎಂದು ಸಂಬೋಧಿಸಿ ತನ್ನ ಧರ್ಮಾಭಿಮಾನವನ್ನು ಸೂಚಿಸಿದಾಗ, ಈ ಅನುಕೂಲ ಸನ್ನಿವೇಶವನ್ನು ಉಪಯೋಗಿಸಿಕೊಂಡು ಪಾಂಡವರಿಗೆ ರಾಜ್ಯಾರ್ಧವನ್ನು ಕೊಡಿಸಿ ಜ್ಞಾತಿಗಳಲ್ಲಿ ದ್ವೇಷ ಬೆಳೆಯಲು

ಅವಕಾಶವೇ ಇಲ್ಲದಂತೆ ಮಾಡಬೇಕೆಂದು ಸಂಕಲ್ಪಿಸುತ್ತಾನೆ, ಈ ಧರ್ಮ ಶ್ರದ್ಧೆಯ ಆಚಾರ್ಯ ದ್ರೋಣ. ಆದರಂತೆ ಆಚಾರ್ಯದಕ್ಷಿಣೆಯಾಗಿ ತಾನು ಪಡೆಯಬಯಸುವುದು ಪಾಂಡವರೊಡನೆ ರಾಜ್ಯ ಸಂವಿಭಾಗ ಎಂದು ಹೇಳಿ ಬಿಡುತ್ತಾನೆ. ಹೀಗೆಯೇ ಧರ್ಮಾಧಿಕಾರವುಳ್ಳವರ ಮಾತುಗಳಿಂದ ಮಹಾ ಕುಲಗಳಲ್ಲಿರಬಹುದಾದ ಭೇದಭಾವಗಳು ಸಮಾಧಾನ ಹೊಂದಬೇಕು ಎಂದೂ ಹೇಳುತ್ತಾನೆ. ಧರ್ಮಮಾರ್ಗದಲ್ಲಿ ಅನುಷ್ಠಿಸುವ ವ್ಯವಹಾರಗಳಲ್ಲಿ ಮೋಸ ವಿರಕೂಡದು ಎಂಬುದನ್ನೂ ಪುನಃ ಪುನಃ ದುರ್ಯೋಧನನಿಗೆ ತಿಳಿಸುತ್ತಾನೆ. ಕೊನೆಯಲ್ಲಿ ದುರ್ಯೋಧನನು 'ರಾಜ್ಯಾರ್ಧವನ್ನು ಇದೋ ಕೊಟ್ಟಿದ್ದೇನೆ' ಎಂದಾಗ ದ್ರೋಣನ ಸಂತೋಷಕ್ಕೆ ಪಾರವಿಲ್ಲ. 'ಹಂತ ಸರ್ವೇ ಪ್ರಸನ್ನಾಃ ಸ್ಮಃ ಪ್ರವೃದ್ಧ ಕುಲಸಂಗ್ರಹಾಃ' ಎಂದು ಸಂತೃಪ್ತನಾಗುತ್ತಾನೆ. ದ್ರೋಣನು ಉದಾತ್ತಮನಸ್ಸಿನವನು. ಭೀಷ್ಮನೇ ಹೇಳುವಂತೆ ಆವನು ಕಪಟವರಿಯದ ಋಜುಬುದ್ಧಿಯ ಬ್ರಾಹ್ಮಣ.

ಕೆಲವು ಸಂದರ್ಭಗಳಲ್ಲಿ ದ್ರೋಣನು ಸ್ವಲ್ಪವೂ ಸಂಯಮವಿಲ್ಲದವನಂತೆ ವರ್ತಿಸಿಬಿಡುತ್ತಾನೆ. ಅಭಿಮನ್ಯು ಬಂಧಿತನಾದನೆಂದು ಕೇಳಿದಾಗ ಅವನ ಕೋಪ ವಿ·ತಿಮೀರುತ್ತದೆ. ಪಂಚರಾತ್ರದ ಷರತ್ತನ್ನು ಭೀಷ್ಮನ ಸಲಹೆಯ ಮೇಲೆ ಒಪ್ಪಿಕೊಳ್ಳುವಾಗಲೂ ತುಂಬ ಆತುರವನ್ನು ತೋರಿಸುತ್ತಾನೆ. ಅವನಲ್ಲಿ ದೂರದೃಷ್ಟಿಯಿಲ್ಲ. ಉಪಾಯದಿಂದ ಕಾರ್ಯ ಸಾಧಿಸಿಕೊಳ್ಳುವ ಪ್ರವೃತ್ತಿಯೂ ಇಲ್ಲ. ಬಹಳಬೇಗ ಭಾವಾವೇಶಗಳಿಗೆ ವಶನಾಗುವ, ಋಜುಬುದ್ಧಿಯ ಬ್ರಾಹ್ಮಣ, ಕಪಟವರಿಯದ ಧರ್ಮಬುದ್ಧಿಯ ಕ್ಷತ್ರಾಚಾರ್ಯ ದ್ರೋಣ.

ಕರ್ಣ—ಪಂಚರಾತ್ರ ರೂಪಕದಲ್ಲಿ ಕರ್ಣನ ಪಾತ್ರ ಅಷ್ಟೇನೂ ಹೆಚ್ಚಿನದಲ್ಲ. ಅವನಾಡುವ ಮಾತು ಮಾಡುವ ಕೆಲಸ ಸೀಮಿತವಾಗಿದ್ದರೂ ಅವನು ಎಂತಹ ಉದಾತ್ತ ಸ್ವಭಾವದ ದಯಾವೀರ ಎಂಬುದನ್ನು ಅವು ಎತ್ತಿ ತೋರಿಸುತ್ತವೆ. "ರಾಜನಾದವನು ಬ್ರಾಹ್ಮಣರ ಮಡಿಲೊಳಕ್ಕೆ ಸರ್ವಸ್ವವನ್ನೂ ಸುರಿದು ಬಿಟ್ಟು ತನ್ನ ಮಕ್ಕಳಿಗೆ ಧನುಸ್ಸೊಂದನ್ನೇ ಕೊಡಬೇಕು" ಎಂಬ ಅವನ ಮಾತು ಅವನ ಸಹಜವಾದ ದಾನ ಶೌಂಡೀರ್ಯವನ್ನು ನಿರೂಪಿಸುತ್ತದೆ. 'ಬಾಣಾಧೀನಾ ಕ್ಷತ್ರಿಯಾಣಾಂ ಸಮೃದ್ಧಿಃ' 'ಕೋಶ ರಾಷ್ಟ್ರಗಳಿಂದ ಕೂಡಿದ ಇಕ್ಷ್ವಾಕು ಮುಂತಾದ ವೀರ ,ಪುರುಷರೆಲ್ಲ ಶರೀರ ನೀಗಿದ್ದರೂ (ತಾವು ಮಾಡಿದ) ಯಜ್ಞ

ಬ್ರಾಹ್ಮಣ, ನಾವು ಕ್ಷತ್ರಿಯ ವಂಶಜರು; ನೀನು ಗುರು, ನಾವು (ನಿನ್ನ) ಶಿಷ್ಯರಾದುದರಿಂದಲೇ ದೊಡ್ಡವರಾಗಿರುವವರು. [೨೭]

70 ದ್ರೋಣ—ಮಹಾತ್ಮರು ತಮ್ಮನ್ನು ಅಲ್ಲಗಳೆದುಕೊಳ್ಳಲು ಉತ್ಸಾಹಿಗಳಾಗಿರಬಾರದಲ್ಲವೇ! ಬಾ, ಕುಮಾರ; ನನಗೇ ಅಭಿವಾದನಮಾಡು.

71 ದುರ್ಯೋಧನ—ಆಚಾರ್ಯ, ಅಭಿವಾದನ ಮಾಡುತ್ತೇನೆ.

72 ದ್ರೋಣ—ಬಾ ಬಾ ಕುಮಾರ! ಇದೇ ರೀತಿ ಅವಭೃಥಸ್ನಾನ ಮಾಡುವುದರಲ್ಲಿ ಶ್ರಮ ಹೊಂದು.

73 ದುರ್ಯೋಧನ—ಅನುಗೃಹೀತನಾದೆ. ಪಿತಾಮಹ, (ನಿನಗೆ) ಅಭಿವಾದನ ಮಾಡುತ್ತೇನೆ.

74 ಭೀಷ್ಮ—ಬಾ ಬಾ ಪೌತ್ರ. ಇದೇ ರೀತಿ ನಿನಗೆ ಶಾಂತಬುದ್ಧಿ ಇರಲಿ.

75 ದುರ್ಯೋಧನ—ಅನುಗೃಹೀತನಾದೆ. (ಸೋದರ)ಮಾವನೇ! ಅಭಿವಾದನ ಮಾಡುತ್ತೇನೆ.

76 ಶಕುನಿ—ವತ್ಸ!

77 ಆಪ್ತರಿಗೇ ದಕ್ಷಿಣೆ ಮೀಸಲಾದ ಎಲ್ಲ ಯಾಗಗಳನ್ನೂ ಹೀಗೆಯೇ ಆಚರಿಸಿ, ರಾಜಸೂಯದಲ್ಲಿ ಜರಾಸಂಧನಂತೆ ರಾಜರುಗಳನ್ನು ಜಯಿಸಿ (ಸೆರೆಹಿಡಿದು) ತಾ. [೨೮]

78 ದ್ರೋಣ—ಅಯ್ಯೋ! ಆಶೀರ್ವಚನದಲ್ಲೂ ಶಕುನಿಯು (ಯುದ್ಧದ) ಉದ್ಯಮವನ್ನೇ ಉಂಟುಮಾಡುತ್ತಿರುವನಲ್ಲ! ಕಷ್ಟ! ಈ ಕ್ಷತ್ರಿಯ ಕುಮಾರ (ಯಾವಾಗಲೂ) ವಿರೋಧಪ್ರಿಯನೇ!

79 ದುರ್ಯೋಧನ—ಮಿತ್ರ ಕರ್ಣ! ಗುರುಜನರಿಗೆ ಪ್ರಣಾಮ ಮುಗಿದ ಮೇಲೆ ಕ್ರಮಪ್ರಾಪ್ತವಾದ ವಯಸ್ಯನ ಸದಾಶಯವನ್ನು ಸ್ವೀಕರಿಸು.

80 ಕರ್ಣ—ಗಾಂಧಾರೀಕುಮಾರ!

81 ಯಜ್ಞಗಳಿಗೆ ಸಂಬಂಧಿಸಿದ ವ್ರತಗಳಿಂದ ಈ ನಿನ್ನ ಶರೀರ ಬಡವಾಗಿದೆ. (ನನ್ನ) ಬಲವನ್ನು ನೀನು ತಡೆಯಬಲ್ಲೆಯಾದರೆ ಗಾಢವಾಗಿ ಆಲಂಗಿಸುತ್ತೇನೆ. ಆದ್ದರಿಂದಲೇ ನಿನ್ನ ಒಪ್ಪಿಗೆಯಿಲ್ಲದೆ ನಾನು ಮುಂದಾಗದಿದ್ದೇನೆ. ರಾಜರ್ಷಿಯಂತೆ (ಆಡುತ್ತಿರುವ) ನಿನ್ನ ಧೀರ ವಚನಗಳನ್ನು ಕೇಳಿ ನನಗೆ ಹೆದರಿಕೆಯಾಗುತ್ತಿದೆ. [೨೯]

82 ದುರ್ಯೋಧನ—ನಿನ್ನ ಬುದ್ಧಿಯು ಹೀಗೆಯೇ ಇರಲಿ.

83 ದ್ರೋಣ—ಪುತ್ರ ದುರ್ಯೋಧನ! ಇದೋ, ಮಹೇಂದ್ರನಿಗೆ ಪ್ರಿಯ ಮಿತ್ರನಾದ ಭೀಷ್ಮಕನು ನಿನ್ನನ್ನು ಗೌರವಿಸುತ್ತಿದ್ದಾನೆ.

84 ದುರ್ಯೋಧನ—ಆರ್ಯನಿಗೆ ಸ್ವಾಗತ. ಅಭಿವಾದನ ಮಾಡುತ್ತೇನೆ.

85 ಭೀಷ್ಮ—ಪೌತ್ರ ದುರ್ಯೋಧನ! ಇದೋ, ದಕ್ಷಿಣಾಪಥಕ್ಕೆಲ್ಲ ಹೆಬ್ಬಾಗಿಲ ಅಗುಳಿಯಂತೆ ರಕ್ಷಕನಾದ ಭೂರಿಶ್ರವಸ್ಸು ನಿನ್ನನ್ನು ಅಭಿನಂದಿಸುತ್ತಿದ್ದಾನೆ.

86 ದುರ್ಯೋಧನ—ಆರ್ಯನಿಗೆ ಸ್ವಾಗತ!

87 ದ್ರೋಣ-ಪುತ್ರ ದುರ್ಯೋಧನ! ನಿನ್ನ ಯಜ್ಞವನ್ನು ಅಭಿನಂದಿಸುತ್ತಾ ಶ್ರೀಕೃಷ್ಣನಿಂದ ಕಳುಹಿಸಲ್ಪಟ್ಟಿರುವ ಅಭಿಮನ್ಯು ನಿನ್ನನ್ನು ಗೌರವಿಸುತ್ತಾನೆ.

88 ದುರ್ಯೋಧನ—ಬಾ, ಬಾ ವತ್ಸ!....

89 ಶಕುನಿ—ವತ್ಸ ದುರ್ಯೋಧನ! ಇದೋ, ಜರಾಸಂಧನ ಮಗ ಸಹದೇವ ನಿನಗೆ ಅಭಿವಾದನ ಮಾಡುತ್ತಿದ್ದಾನೆ.

90 ದುರ್ಯೋಧನ—ಬಾ, ಬಾ ವತ್ಸ! ತಂದೆಗೆ ಸದೃಶವಾದ ಪರಾಕ್ರಮವುಳ್ಳವನಾಗು.

91 ಎಲ್ಲರೂ—ಈ ಎಲ್ಲ ರಾಜಮಂಡಲವೂ ನಿನ್ನನ್ನು ಅಭಿನಂದಿಸುತ್ತಿದೆ.

92 ದುರ್ಯೋಧನ—ಅನುಗೃಹೀತನಾದೆ. ಇದೇನು? ಸರ್ವರಾಜ ಸಮೂಹವೂ ಬಂದಿರುವಾಗ ವಿರಾಟನೇಕೆ ಬರಲಿಲ್ಲ?

93 ಶಕುನಿ—ಅವನಿಗಾಗಿ ನಾನೇ ದೂತನನ್ನು ಕಳುಹಿಸಿದ್ದೆ. (ತಡವಾಗಿ) ಮಾರ್ಗದಲ್ಲಿ (ಬರುತ್ತಿ) ರುವನೆಂದು ಊಹಿಸುತ್ತೇನೆ.

94 ದುರ್ಯೋಧನ—ಆಚಾರ್ಯನೇ! ಧರ್ಮದಲ್ಲೂ ಧನುಸ್ಸಿನಲ್ಲೂ ಆಚಾರ್ಯನಾದವನೇ! ದಕ್ಷಿಣೆಯು ಸ್ವೀಕೃತವಾಗಲಿ.

95 ದ್ರೋಣ—ದಕ್ಷಿಣೆ ಎಂದೆಯಾ? ಆಗಲಿ, ಆಗಲಿ. ನಾನೇ ನಿನ್ನನ್ನು ಯಾಚಿಸಿ ತೆಗೆದುಕೊಳ್ಳುತ್ತೇನೆ.

96 ದುರ್ಯೋಧನ—ಏನು, ಆಚಾರ್ಯನೂ ಯಾಚಿಸಿ ತೆಗೆದುಕೊಳ್ಳುತ್ತಾನೆಯೆ?

97 ಭೀಷ್ಮ—ಓಃ! (ಇದರಿಂದ) ಪ್ರಯೋಜನವಾದರೂ ಏನು? ಯಾಕೆಂದರೆ—

2

98 ಬಾಲ್ಯದಲ್ಲೇ (ನೀನು) ವಿಧ್ಯುಕ್ತವಾಗಿ ಕೊಟ್ಟ ಸೋಮರಸವನ್ನು ಕುಡಿದಿದ್ದಾನೆ. ಛತ್ರಚ್ಛಾಯೆಯು ಸೇವಿಸಲ್ಪಡುತ್ತಿದೆ; ಖ್ಯಾತಿಯೂ ಇದೆ. ಬ್ರಾಹ್ಮಣನಾದ ಕ್ಷತ್ರಾಚಾರ್ಯನು ದರಿದ್ರನಾಗಿರಬಹುದಾದ ದ್ರವ್ಯ ಯಾವುದು? ಪ್ರಯೋಜನ ಯಾವುದು? ವಿಶೇಷ (ಉದ್ದೇಶ) ವಾದರೂ ಯಾವುದು? [೩೦]

99 ದುರ್ಯೋಧನ—ಅಪ್ಪಣೆ ಮಾಡು, ನೀನು ಇಚ್ಛಿಸುವುದೇನನ್ನು? ನಾನು (ನಿನಗಾಗಿ) ಏನು ಮಾಡಲಿ?

100 ದ್ರೋಣ—ಪುತ್ರ ದುರ್ಯೋಧನ, ಹೇಳುತ್ತೇನೆ.

101 ದುರ್ಯೋಧನ—ನೀನು ಹಿಂದುಮುಂದು ನೋಡುವುದೇತಕ್ಕೆ?

102 ನಾನು (ನಿನಗೆ) ಪ್ರಾಣಕ್ಕಿಂತಲೂ ಹೆಚ್ಚು. ನಿನ್ನಿಂದ ಉಪದೇಶ ಹೊಂದಿದವನು; ಶೂರರಲ್ಲಿ ಗಣನೆ ಹೊಂದಿದ್ದೇನೆ; ಸಾಹಸ ಕಾರ್ಯಗಳನ್ನು ಮಾಡಿದ್ದೇನೆ. ಯಾವ ಶಂಕೆಯೂ ಇಲ್ಲದೆ ಹೇಳು. ನಿನಗೇನು ಬೇಕು? ನಾನು ಏನನ್ನು ಕೊಡಲಿ? ನನ್ನ ಗಡೆ ಕೈಯಲ್ಲಿದೆ. (ಆದ್ದರಿಂದ) ಎಲ್ಲವೂ ನಿನ್ನದೇ! [೩೧]

103 ದ್ರೋಣ—ಪುತ್ರ! ಹೇಳುತ್ತೇನೆ, ಇರು. ಕಣ್ಣೀರಿನ ವೇಗ ನನ್ನನ್ನು ತಡೆಯುತ್ತಿದೆ.

104 ಎಲ್ಲರೂ—ಏನಿದು? ಆಚಾರ್ಯನೂ ಕಣ್ಣೀರಿಡುತ್ತಾನಲ್ಲ!

105 ಭೀಷ್ಮ—ಪೌತ್ರ ದುರ್ಯೋಧನ! ನಿನ್ನ ಪರಿಶ್ರಮ ನಿಷ್ಫಲ.

106 ದುರ್ಯೋಧನ—ಯಾರಲ್ಲಿ?

107 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ!

108 ದುರ್ಯೋಧನ—ಸ್ವಲ್ಪ ನೀರು.

109 ಭಟ—ಮಹಾರಾಜನ ಅಪ್ಪಣೆಯಂತೆ. (ಹೋಗಿ, ಪುನಃ ಪ್ರವೇಶಿಸಿ) ಮಹಾರಾಜನಿಗೆ ಜಯವಾಗಲಿ. ಇದೋ ನೀರು.

110 ದುರ್ಯೋಧನ—ತಾ. (ಕಲಶವನ್ನು ತೆಗೆದುಕೊಂಡು) ಆಚಾರ್ಯನೆ, ಕಣ್ಣೀರು ಹರಿದು ಕಳಂಕಿತವಾದ ಮುಖವನ್ನು ತೊಳೆದುಕೊ.

111 ದ್ರೋಣ—ಇರಲಿ, ಇರಲಿ. ನನ್ನ ಕಾರ್ಯವನ್ನು ನಡಸಿಕೊಡುವುದೇ ಮುಖೋದಕವಾಗಲಿ.

112 ದುರ್ಯೋಧನ—ಹಾ ಕಷ್ಟ!

ನನ್ನ ಹಿಂದಿನ ಅಪ್ರಾಮಾಣಿಕತೆಯನ್ನೇ ನೀನು ವಿಮರ್ಶಿಸುತ್ತಿದ್ದರೆ, ಮತ್ತು ಕೊಡುವುದಿಲ್ಲವೆಂದೇ ನಿರ್ಣಯಿಸಿಕೊಂಡಿದ್ದರೆ, ನೂರಾರು ಬಾಣ (ಗಳ ಪ್ರಯೋಗ) ದಿಂದ ಕಠಿಣವಾಗಿರುವ ನಿನ್ನ ಕೈಯನ್ನು ಚಾಚು. ಇದೋ ಪ್ರತಿಗ್ರಹಕ್ಕೆ ಸಾಧನವಾದ ನೀರು (ಎರೆಯುತ್ತೇನೆ). [೩೨]

113 ದ್ರೋಣ—ಭಲೆ! (ಈಗ) ನನ್ನ ಮನಸ್ಸಿಗೆ ನಂಬಿಕೆ ಸಿಕ್ಕಿತು. ಪುತ್ರ, ಕೇಳು—

114 ಹನ್ನೆರಡು ವರ್ಷಗಳಿಂದ ನಿರಾಶ್ರಯರಾದ ಯಾವ ಪಾಂಡವರ ಗತಿ ಎಲ್ಲಿಯೂ ತಿಳಿಯದೆಯೋ ಇದೆಯೋ ಆ ಪಾಂಡವರೊಡನೆ ರಾಜ್ಯ ವಿಭಾಗ ಮಾಡಿಕೊ. ಇದೇ (ನಾನು ಯಾಚಿಸುವ) ಭಿಕ್ಷೆ; ಇದೇ ನನಗೆ ದಕ್ಷಿಣೆಯೂ. [೩೩]

115 ಶಕುನಿ—(ಉದ್ವೇಗದಿಂದ) ಅದಾಗದು, ಅದಾಗದು!

116 ನಿನ್ನ ಗುರುತ್ವದಲ್ಲಿ ವಿಶ್ವಾಸವಿಟ್ಟು (ನಿನಗಿಷ್ಟವಾದುದನ್ನು ಕೊಡುತ್ತೇನೆಂದು) ಹೇಳಿದ ಶಿಷ್ಯನಿಗೆ, ಅಪ್ರಸ್ತುತವಾದುದನ್ನು ತಂದೊಡ್ಡಿ, ಧರ್ಮದ ಹೆಸರಿನಲ್ಲಿ ಮಾಡುತ್ತಿರುವ ಈ ವಂಚನೆ ಯುಕ್ತವಾದುದೆ? [೩೪]

117 ದ್ರೋಣ—'ಧರ್ಮದ ಹೆಸರಿನಲ್ಲಿ ಮಾಡುತ್ತಿರುವ ವಂಚನೆ' ಎಂದೆಯಾ? ಬೇಡ, ಬೇಡ! ಗಾಂಧಾರ ರಾಜ್ಯದ ವ್ಯವಹಾರಗಳಿಂದ ಪ್ರಭಾವಿತನಾದ ಶಕುನಿಯೆ! ನಿನ್ನ ಅನಾರ್ಯಭಾವದಿಂದ ಲೋಕವನ್ನೆಲ್ಲಾ ಅನಾರ್ಯವೆಂದೇ ತಿಳಿಯುತ್ತಿದ್ದೀ. ಓಹೋ ಕಷ್ಟ!

118 ಭ್ರಾತೃಗಳಿಗೆ ಅವರ ತಂದೆಯಿಂದ ಬಂದ ರಾಜ್ಯವನ್ನು ಕೊಡು ಎಂದರೆ ಅದು ವಂಚನೆ! ಯಾಚಿಸಿದಾಗ ಅದನ್ನು ಕೊಡುವುದೊಳ್ಳೆಯದೋ, ಬಲಾತ್ಕಾರವಾಗಿ ಅವರಿಂದಲೇ ಕಸಿದುಕೊಳ್ಳಲ್ಪಟ್ಟರೆ ಒಳ್ಳೆಯದೊ? [೩೫]

119 ಎಲ್ಲರೂ—ಏನು ಬಲಾತ್ಕಾರವಾಗಿಯೇ?

120 ಭೀಷ್ಮ—ಪೌತ್ರ ದುರ್ಯೋಧನ! ಅವಭೃಥ ಸ್ನಾನ ಮಾತ್ರವೇ ನಮಗೆ ಪ್ರಸ್ತುತವಾದದ್ದು. ಮಿತ್ರಮುಖನಾದ ಶಕುನಿಯ ಮಾತನ್ನು ಕೇಳಬೇಡ. ನೋಡು, ಪೌತ್ರ—

121 ದ್ರುಪದ ರಾಜಕುಮಾರಿಯ ಜತೆಯಲ್ಲಿ ಪಾಂಡವರು ಕಾಡಿನ ಧೂಳಿನಿಂದ ಕಂಗಾಲಾಗಿ ಭೂಮಿಯಮೇಲೆ ಅಲೆಯುತ್ತಿರುವುದು, ನೀನು ಅವರ

ವಿಷಯದಲ್ಲಿ ವಿಮುಖನಾಗಿರುವುದು, ಅವರೂ (ನಿನಗೆ) ಪ್ರತಿಕೂಲರಾಗಿರುವುದು,— ಇವೆಲ್ಲವೂ ಶಕುನಿಯ ಕ್ರೌರ್ಯಮೂಲವಾದ ದೂಷಣೆಯ ಫಲ. [೩೭]

122 ದುರ್ಯೋಧನ— ಪಿತಾಮಹ, ಅದಿರಲಿ. ಆಚಾರ್ಯ, ಇದೊಂದನ್ನು ಕೇಳುತ್ತೇನೆ.

123 ದ್ರೋಣ —ಕುಮಾರ, (ಅದೇನು) ಕೇಳು.

124 ದುರ್ಯೋಧನ- ಹಿಂದೆ ಸಭಾಮಧ್ಯದಲ್ಲಿ ರಾಜ್ಯ ಮತ್ತು ಮಾನ ಎರಡರಲ್ಲೂ ಅವರು ಪರಿಭವಗೊಳಿಸಲ್ಪಟ್ಟರಲ್ಲವೇ! ಬಲಾತ್ಕಾರ ಮಾಡಲು ಸಮರ್ಥರೇ ಆಗಿದ್ದರೆ, ಆದೇಕೆ ಅವರ ರೋಷ ತಡೆಹಿಡಿಯಲ್ಪಟ್ಟಿತು ? [೩೭]

125 ದ್ರೋಣ— ಈ ವಿಚಾರದಲ್ಲಿ ಧರ್ಮದ ನೆಪದಿಂದ ವಂಚಿತನಾದ, ಜೂಜಿನ ನಿಯಮಗಳಲ್ಲಿ ಆದರವಿಟ್ಟಿದ್ದ ಆ ಯುಧಿಷ್ಠಿರನು ಪ್ರಶ್ನಿಸಲ್ಪಡಬೇಕು, —

126 —ಯಾವಾತನಿಂದ ಸಭಾಸ್ತಂಭವನ್ನೇ (ಕಿತ್ತು) ಕೈಗೆತ್ತಿಕೊಳ್ಳಲೆತ್ನಿಸಿದ್ದ ಭೀಮನು ತಡೆಯಲ್ಪಟ್ಟನೋ. (ಆಗ) ಆ ಕಂಭ ಒಬ್ಬಾತನ ಮೇಲೆ ಎಸೆಯಲ್ಪಟ್ಟಿದ್ದೇ ಆಗಿದ್ದರೆ, (ಈಗ) ಶಕುನಿಯು ನಮ್ಮನ್ನು ಆಕ್ಷೇಪಿಸಲು ಇರುತ್ತಿರಲಿಲ್ಲ. [೩೮]

127 ಭೀಷ್ಮ—ಏನನ್ನೋ ಆರಂಭಿಸಿದ್ದು; ಬೇರೇನೋ ಆಗಿಬಿಟ್ಟಿತು. ಆಚಾರ್ಯ, ಈಗ ನಮ್ಮ ಕಾರ್ಯ ಗುರುತರವಾದುದು, ಕಲಹವಲ್ಲ.

128 ದ್ರೋಣ - ಈ ವಿಚಾರದಲ್ಲಿ ಕೀಳುಮಟ್ಟದ ಯಾಚನೆ ಬೇಡವೇ ಬೇಡ. ಕಲಹವೇ ಆಗಲಿ.

129 ಭೀಷ್ಮ—ಪ್ರಸನ್ನನಾಗು ಆಚಾರ್ಯ! ಕುಮಾರ, ನೋಡು.—

130 ಯಾರು ದುರ್ಬಲರೊ, ದೀನರೊ, ಆಶ್ರಯವಿಲ್ಲದವರೊ, ನಿನ್ನೊಡನೆ ಸಂಧಿಯನ್ನು ಅರಸುತ್ತಾರೊ, ಗರ್ವ ಪಡುತ್ತಿಲ್ಲವೋ, ನಿನ್ನಲ್ಲಿ ಪ್ರೇಮವುಳ್ಳವರೊ, ಅಂತಹ ಅವರನ್ನು ಜ್ಯೇಷ್ಠನಾದ ನೀನು ನಿನ್ನ ಕುಟುಂಬದಲ್ಲೇ ಇಟ್ಟುಕೊಳ್ಳುತ್ತೀಯೊ, (ಅಥವಾ ಅವರು ವನ್ಯ) ಮೃಗಗಳೊಡನೆಯೇ ಇರಲೊ ? [೩೯]

131 ಶಕುನಿ— ಇರಲಿ, ಇರಲಿ.

132 ಕರ್ಣ—ಆಚಾರ್ಯ, ಕೋಪ ಸಾಕು. ದುರ್ಯೋಧನನಾದರೊ—

133 ತನಗೆ ಹಿತವಾದುದೇ ಆಗಿದ್ದರೂ ಪರುಷೋಕ್ತಿಯನ್ನು ಕೇಳಿದ ಕೂಡಲೇ ಕೋಪಗೊಳ್ಳುತ್ತಾನೆ; ವಿಶೇಷಗುಣ ಸಂಪನ್ನನಾದ ಬೇರೊಬ್ಬನು ಎಷ್ಟೇ ಶ್ರೇಷ್ಠನಾಗಿರಲಿ, ಅವನ ಹೊಗಳಿಕೆಯನ್ನು ಸಹಿಸನು. ಕೊನೆಯ ಹಂತಕ್ಕೆ ಬಂದಿರುವ ಶಿಷ್ಯಕಾರ್ಯವಾದ ಅವಭೃಥಸ್ನಾನವು ಈಡೇರಿಸಲ್ಪಡಲಿ. ಅನೇಕ ಚಾಳಿಗಳಿಂದ ಕೂಡಿದ ಆನೆಯಂತೆ ಒಳ್ಳೆಯತನದಿಂದಲೇ (ಈತನೂ) ನಡಸಲ್ಪಡಬೇಕು. [೪೦]

134 ದ್ರೋಣ—ವತ್ಸ ಕರ್ಣ; ಬ್ರಾಹ್ಮಣ್ಯವು ವಿಶೇಷ ತೇಜಸ್ಸಿನಿಂದ ಕೂಡಿದ್ದು. ಸಕಾಲದಲ್ಲಿ ಎಚ್ಚರಿಸಲ್ಪಟ್ಟೆ. ಇದೋ ನಾನು ನಿನ್ನ ಅಭಿಪ್ರಾಯ ವನ್ನೇ ಅನುವರ್ತಿಸುತ್ತೇನೆ. ಪುತ್ರ ದುರ್ಯೋಧನ, ನಾನು ನಿನ್ನಮೇಲೆ ಪ್ರಭಾವ ಬೀರಲು ಸ್ವಾತಂತ್ರ್ಯವುಳ್ಳವನು ತಾನೆ?

135 ಭೀಷ್ಮ—ಈಗ ಈತ ಸರಿಯಾದ ಮಾರ್ಗದಲ್ಲಿ ಆರಂಭಿಸಿದ್ದಾನೆ. ದುರ್ವಿನೀತರಿಗೆ ಸಮಾಧಾನದ ಮಾತುಗಳೇ ಔಷಧ.

136 ದುರ್ಯೋಧನ—ನನಗೆ ಮಾತ್ರವಲ್ಲ. ನನ್ನ ಕುಲಕ್ಕೇ ನೀನು ಪ್ರಭು.

137 ದ್ರೋಣ—ಈ ಮಾತು ನಿನಗೆ ಮಾತ್ರ ಯುಕ್ತ. ಆದುದರಿಂದ, ಕುಮಾರ,—

138 ನೀನು ನನ್ನಿಂದ ವಂಚಿಸಲ್ಪಡುವಿಯಾದರೆ ಅದರಲ್ಲಿ ನಿನ್ನ ದೋಷ ವೇನೂ ಇಲ್ಲ. ನಿನ್ನನ್ನು ನಾನು ಪೀಡಿಸುತ್ತೇನಾದರೆ, ಆಗಲಿ; ಅದರಿಂದ ನಿನಗೇ ಲಾಭ. ದೊಡ್ಡದೊಡ್ಡ ಕುಲಗಳಲ್ಲಿ ಪರಸ್ಪರ ಇರಬಹುದಾದ ಭೇದ ಗಳು ಧರ್ಮಾಧಿಕಾರವುಳ್ಳವರ ಮಾತುಗಳಿಂದ ಸಮಾಧಾನ ಹೊಂದು ತ್ತವೆ. [೪೧]

139 ದುರ್ಯೋಧನ—ಆದ್ದರಿಂದಲೇ ಆಲೋಚಿಸಲಿಚ್ಛಿಸುತ್ತೇನೆ.

140 ದ್ರೋಣ—ಪುತ್ರ, ಯಾರೊಡನೆ ಆಲೋಚಿಸಲಿಚ್ಛಿಸುತ್ತೀ?

141 ಭೀಷ್ಮನೊಡನೆಯೆ? ಕರ್ಣನೊಡನೆಯೆ? ಕೃಪನೊಡನೆಯೆ? ಯಾರೊಡನೆ? ಸಿಂಧುರಾಜ ಜಯದ್ರಥನೊಡನೆಯೆ? ಅಥವಾ ಅಶ್ವತ್ಥಾಮ ನೊಡನೆಯೆ? ವಿದುರನೊಡನೆಯೆ? ತಂದೆಯೊಡನೆಯೆ? ನಿನ್ನ ತಾಯಿ ಯೊಡನೆಯೆ? ಹೇಳು, ಪುತ್ರ, ಯಾರೊಡನೆ? [೪೨]

142 ದುರ್ಯೋಧನ—ಅಲ್ಲ, ಅಲ್ಲ, ಸೋದರಮಾವನೊಡನೆ.

143 ದ್ರೋಣ—ಶಕುನಿಯೊಡನೆಯೆ ? (ಆತ್ಮಗತ) ಅಯ್ಯೋ, ಕೆಲಸ ಕೆಟ್ಟಿತು !

144 ದುರ್ಯೋಧನ—ಮಾವ, ಇತ್ತಬಾ. ಮಿತ್ರ ಕರ್ಣ, ಇತ್ತಬಾ.

145 ದ್ರೋಣ—(ಆತ್ಮಗತ) ಒಳ್ಳೆಯದು. ಹೀಗೆ ಮಾಡುತ್ತೇನೆ. (ಪ್ರಕಾಶ) ವತ್ಸ ಗಾಂಧಾರರಾಜ, ಇತ್ತಬಾ.

146 ಶಕುನಿ—ಇದೋ ಬಂದಿದ್ದೇನೆ.

147 ದ್ರೋಣ—ವತ್ಸ,

148 ಮುದಿತನವು ಕೋಪಭೂಯಿಷ್ಠವಾದುದು. ಈ ಮುದುಕನ ಮಾತು ಕ್ಷಮಿಸಲ್ಪಡಬೇಕು. ಈ (ನನ್ನ) ಒರಟುಮಾತಿಗೆ ಆಲಿಂಗನವೇ ಸಮಾಧಾನ. [೪೩]

149 ಭೀಷ್ಮ—(ಆತ್ಮಗತ) ಇದೋ, ಶಿಷ್ಯನ ಮೇಲಣ ವಾತ್ಸಲ್ಯದಿಂದ ಆಚಾರ್ಯನೂ ಶಕುನಿಯನ್ನು ಯಾಚಿಸುತ್ತಿದ್ದಾನೆ. ಈ ರೀತಿ ಸಾಂತ್ವನಗೊಳಿಸಲ್ಪಟ್ಟಿದ್ದರೂ ಕೂಡ, ಈತ ಬೇರೆ ತನ್ನ ವಕ್ರತೆಯನ್ನು ಬಿಡುವುದಿಲ್ಲ. [೪೪]

150 ಶಕುನಿ—(ಆತ್ಮಗತ) ಆಹಾ! ಆಚಾರ್ಯನು ಎಂಥ ಶಠನು! ಸ್ವಕಾರ್ಯಲೋಭದಿಂದ ನನ್ನನ್ನೂ ಸಮಾಧಾನಗೊಳಿಸುತ್ತಿದ್ದಾನೆ.

(ಎಲ್ಲರೂ ಸ್ವಲ್ಪ ಮುಂದೆ ಹೋಗಿ ಕುಳಿತುಕೊಳ್ಳುತ್ತಾರೆ)

151 ದುರ್ಯೋಧನ—ಮಾವ, ಪಾಂಡವರಿಗೆ ಅರ್ಧರಾಜ್ಯ (ಕೊಡುವ) ವಿಚಾರದಲ್ಲಿ (ನಿನ್ನ) ನಿಶ್ಚಯವೇನು ?

152 ಶಕುನಿ—ಕೊಡಕೂಡದೆಂಬುದು ನನ್ನ ನಿಶ್ಚಯ.

153 ದುರ್ಯೋಧನ—ಕೊಡಬೇಕೆಂದು ಮಾವನಾದ ನೀನು ಹೇಳಿದ್ದರೆ ಚೆನ್ನಾಗಿತ್ತು.

154 ಶಕುನಿ—ರಾಜ್ಯವನ್ನು ಕೊಡಬೇಕಾಗಿದ್ದರೆ ನಮ್ಮೊಡನೆ ಏತಕ್ಕೆ ಆಲೋಚಿಸುತ್ತೀ? ಎಲ್ಲವನ್ನೂ ಕೊಟ್ಟೇಬಿಡು.

155 ದುರ್ಯೋಧನ—ಮಿತ್ರ ಅಂಗರಾಜ! ಈಗ ನೀನೇನೂ ಹೇಳಲಿಲ್ಲವಲ್ಲ?

156 ಕರ್ಣ—ಈಗ ನಾನೇನು ಹೇಳಲಿ ?

157 ರಾಮನು ಅನುಭವಿಸಿ ಪರಿಪಾಲಿಸಿದ ಸೌಭ್ರಾತ್ರವನ್ನು ನಾನು ಪ್ರತಿಷೇಧಿಸುವುದಿಲ್ಲ. ನಿನ್ನ ಸಾಮರ್ಥ್ಯ ಅಸಾಮರ್ಥ್ಯದ ವಿಚಾರವನ್ನು ನೀನೇ ನಿರ್ಣಯಿಸಬೇಕು. ಯುದ್ಧ ಸಮಯಗಳಲ್ಲಿ ನಾವು (ನಿನಗೇ) ಸಹಾಯಕರು. [೪೫]

158 ದುರ್ಯೋಧನ—ಮಾವ, ಪ್ರಬಲ ಶತ್ರುಗಳುಳ್ಳ, ಜೀವನ ಸೌಕರ್ಯಗಳಿಲ್ಲದ ಯಾವುದಾದರೊಂದು ಕೀಳು ಪ್ರದೇಶವನ್ನು ಆಲೋಚಿಸಿ ಹೇಳು. ಅಲ್ಲಿ ಪಾಂಡವರು ವಾಸಮಾಡಲಿ.

159 ಶಕುನಿ—ಅಯ್ಯೋ!

160 (ಅಂತಹ ಪ್ರದೇಶ) ಶೂನ್ಯವೆಂದು ಹೇಳುತ್ತೇನೆ. ಅರ್ಜುನನಿಗಿಂತ ಬಲವತ್ತರನಾದವನು ಯಾವನು? ಯುಧಿಷ್ಠಿರ ಎಲ್ಲಿ ರಾಜನಾಗಿರುವನೋ ಅಲ್ಲಿ ಬಂಜರು ಭೂಮಿಗಳಲ್ಲೂ ಸಸ್ಯ ಬೆಳೆದೀತು! [೪೬]

161 ದುರ್ಯೋಧನ—ಹಾಗಾದರೆ, ಈಗ

162 ಗುರುವಿನ ಕರತಲದ ಮಧ್ಯೆ ನಾನು ನೀರೆರೆದು ಬಿಟ್ಟದ್ದೇನೆ. (ನನ್ನ) ಈ (ದಾನ) ಪ್ರಮಾಣವನ್ನು ಈ ಪೃಥಿವಿಯಲ್ಲಿನ ಕುಲವೃದ್ಧರೆಲ್ಲರೂ ಕಿವಿಯಾರ ಕೇಳಿದ್ದಾರೆ. ಆದ್ದರಿಂದ ಇದು ಅನೀತಿಯೋ ವಂಚನೆಯೋ ಹೇಗಾದರೂ ಆಗಿರಲಿ; ಆ ನೀರೆರೆದು ಮಾಡಿದ ದಾನವನ್ನು ಸತ್ಯವಾಗಿಸಲು ಬಯಸುತ್ತೇನೆ. [೪೭]

163 ಶಕುನಿ—ಅಸತ್ಯವಚನದಿಂದ ನಿನ್ನನ್ನು ಬಿಡುಗಡೆ ಮಾಡಬೇಕು, ಅಷ್ಟೇ ತಾನೆ?

164 ದುರ್ಯೋಧನ—ಅಷ್ಟೆ.

165 ಶಕುನಿ—ಹಾಗಾದರೆ ಇತ್ತ ಬಾ. (ಹತ್ತಿರ ಹೋಗಿ) ಆಚಾರ್ಯನೆ, ಇದೋ ಕುರುರಾಜನು ನಿನ್ನಲ್ಲಿ ವಿಜ್ಞಾಪಿಸಿಕೊಳ್ಳುತ್ತಾನೆ.

166 ದ್ರೋಣ—ವತ್ಸ ಗಾಂಧಾರರಾಜ, ಅದೇನು ಹೇಳು.

167 ಶಕುನಿ—ಐದು ರಾತ್ರಿಗಳೊಳಗೆ ಪಾಂಡವರ ಸಮಾಚಾರವನ್ನು ತಿಳಿದುಕೊಂಡು ಬಂದದ್ದೇ ಆದರೆ ಕೊಟ್ಟೇಕೊಡುತ್ತಾನಂತೆ. ಈಗ ನೀನು (ಅವರ ಸಮಾಚಾರವನ್ನು) ತರತಕ್ಕದ್ದು..

168 ದ್ರೋಣ—ಬೇಡ, ಹಾಗೆ ಹೇಳಬೇಡ.

169 ಯಾರು ಈ ಹನ್ನೆರಡು ವರ್ಷಗಳಿಂದಲೂ ಮೋಸಮಾಡಬೇಕೆಂಬ ಆಸೆಯುಳ್ಳ ನಿಮ್ಮ ಕಣ್ಣಿಗೇ ಬೀಳಲಿಲ್ಲವೋ ಅವರು ಐದು ರಾತ್ರಿಗಳಲ್ಲಿ ನನ್ನಿಂದ ಕರೆತರಲ್ಪಡಬೇಕು (ಅಲ್ಲವೆ)? (ಇದಕ್ಕಿಂತ) ಕೊಡಲಾಗುವುದಿಲ್ಲ ವೆಂದು ಸ್ಪಷ್ಟಾಕ್ಷರಗಳಿಂದ ಹೇಳಿಬಿಡುವುದೇ ಮೇಲು. [೪೮]

170 ಭೀಷ್ಮ—ಪೌತ್ರ ದುರ್ಯೋಧನ, ಧರ್ಮದಲ್ಲಿ ಮೋಸಕ್ಕೆ ಅವಕಾಶ ವಿಲ್ಲ. ಈ ವಿಷಯದಲ್ಲಿ ನಾವೂ ಸಂತುಷ್ಟರಾಗುವೆವು. ನೋಡು, ಪೌತ್ರ!

171 ಒಂದು ವರ್ಷದೊಳಗೋ ಅಥವಾ ಒಂದುನೂರು ವರ್ಷಗಳೊಳಗೋ ಆ ಪಾಂಡವರೊಡನೆ ಪಾಲುಮಾಡಿಕೊ. ಅದರಿಂದ, ವೀರನೆ! ಪ್ರತಿಜ್ಞೆ ಯನ್ನು ಸತ್ಯವಾಗಿಸು. ಕುರುರಾಜರ ಪ್ರತಿಜ್ಞೆ ಯಾವಾಗಲೂ ಸತ್ಯವಾದುದೇ ಅಲ್ಲವೆ? [೪೯]

172 ದುರ್ಯೋಧನ—ಇದೇ ನನ್ನ ನಿಶ್ಚಯ.

173 ದ್ರೋಣ—(ಆತ್ಮಗತ) ಪತ್ನಿಯಿಲ್ಲದೆ ಹೋಗಿದ್ದ ಸೀತೆಯ ಇರವನ್ನು ಸಮುದ್ರಲಂಘನ ಮಾಡಿ (ಬಂದು ರಾಮನಿಗೆ) ನಿವೇದಿಸಿದ ಹನುಮಂತನ ಸ್ಥಿತಿಗೆ ನನ್ನ ಆಸೆ, (ಪ್ರಕೃತ) ಕಾರ್ಯದ ಲೋಭದಿಂದ, ಏರಿದೆ. [೫೦]

174 ಆದರೆ, ಎಲ್ಲಿಂದ ಪಾಂಡವರ ಸಮಾಚಾರವನ್ನು ತರುವುದು?

175 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ. ವಿರಾಟನಗರ ದಿಂದ ದೂತ ಬಂದಿದ್ದಾನೆ.

176 ಎಲ್ಲರೂ—ಬೇಗ ಒಳಕ್ಕೆ ಬರಮಾಡು.

177 ಭಟ—ನಿಮ್ಮ ಅಪ್ಪಣೆಯಂತೆ. (ಹೋಗುತ್ತಾನೆ)

178 (ಪ್ರವೇಶಿಸಿ) ದೂತ—ಮಹಾರಾಜನಿಗೆ ಜಯವಾಗಲಿ.

179 ಎಲ್ಲರೂ—ವಿರಾಟೇಶ್ವರನು ಬಂದಿದ್ದಾನೇನು?

180 ದೂತ—ವಿಷಾದದಿಂದ ಆವೃತನಾಗಿ ಬರಲಿಲ್ಲ.

181 ದುರ್ಯೋಧನ—ಯಾವ ವಿಷಾದ ಅವನಿಗೆ?

182 ದೂತ—ಮಹಾರಾಜನು ಲಾಲಿಸಬೇಕು. ಅವನಿಗೆ ಹತ್ತಿರದ ಸಂಬಂಧಿಗಳಾದ ನೂರುಜನ ಕೀಚಕ ಸೋದರರಿದ್ದಾರಷ್ಟೆ,—

183 (ಅವರು) ರಾತ್ರಿಯಲ್ಲಿ ಯಾವನೋ ಪತ್ನಿಯಿಲ್ಲದವನಿಂದ ಬಾಹು ಗಳಿಂದಲೇ ಕೊಲ್ಲಲ್ಪಟ್ಟರು. ಶಸ್ತ್ರಗಳ ಉಪಯೋಗವಿಲ್ಲದೆಯೇ ಉಂಟಾದ

ವಧೆ ಯೆಂಬುದು ಶರೀರಗಳ (ಪರೀಕ್ಷೆಯ) ಮೇಲಿಂದ ಕಂಡುಬಂದಿತು. [೫೧]

184 ಎಲ್ಲರೂ—ಏನು? 'ಶಸ್ತ್ರಗಳ ಉಪಯೋಗವಿಲ್ಲದೆ ಉಂಟಾದ ವಧೆ' ಎಂದೆಯಾ?

185 ಭೀಷ್ಮ—ಏನು 'ಶಸ್ತ್ರಗಳಿಲ್ಲದೆ'ಯೆ? (ಏಕಾಂತವಾಗಿ) ಆಚಾರ್ಯನೇ, 'ಐದು ರಾತ್ರಿ'ಗಳ ಸಮಯವನ್ನು ಒಪ್ಪಿಕೊಂಡು ಬಿಡು.

186 ದ್ರೋಣ—ಏಕೆ?

187 ಭೀಷ್ಮ—ಇದು ಬಾಹುಶಾಲಿಯಾದ ಭೀಮಸೇನನ ಲೀಲೆ. ಇದು ಸುಸ್ಪಷ್ಟ. ಈ ನೂರು ಸೋದರರ ಮೇಲಿದ್ದ ಅವನ ಆ ರೋಷ ಆ ನೂರು ಜನರ ಮೇಲೆ ಫಲಿಸಿದೆ. [೫೨]

188 ದ್ರೋಣ—ನಿನು ಹೇಗೆ ಬಲ್ಲೆ?

189 ಭೀಷ್ಮ—ಇದೇನು, ಪಂಡಿತನೆ? (ನದಿಯ) ದಡಗಳಲ್ಲಿ ಅಲೆದಾಡುವ ಕರುಗಳ ಬಾಲ್ಯಚಾಪಲವನ್ನೂ ಕೊಂಬುಗಳ (ಹೊಡೆತಕ್ಕೆ ಸಿಕ್ಕಿದ) ಸ್ಥಾನ ಗಳನ್ನೂ ಗೋವೃಷಭಗಳು ಗುರುತಿಸಲಾರವೆ? [೫೩]

190 ದ್ರೋಣ—'ಗೋವೃಷಭಗಳು' ಎಂದೆಯಾ? ಹೌದು. ಕಾರ್ಯ ಸಿದ್ಧಿಸಿತು. (ಪ್ರಕಾಶ) ಪುತ್ರ ದುರ್ಯೋಧನ, 'ಐದುರಾತ್ರಿ'ಗಳ ಕಟ್ಟಳೆಗೆ ನಾನು ಒಪ್ಪಿದೆ.

191 ದುರ್ಯೋಧನ—ಹಾಗಾದರೆ ಸರಿ.

192 ದ್ರೋಣ—ಎಲೌ, ಯಜ್ಞವನ್ನು ಅನುಭವಿಸಲು ಬಂದಿರುವ ರಾಜರುಗಳೆ! ಕೇಳಿ, ನೀವೆಲ್ಲ ಕೇಳಿ, ಇಗೋ ಪೂಜ್ಯನಾದ ಕುರುರಾಜ ದುರ್ಯೋಧನನು,—ಅಲ್ಲ, ಅಲ್ಲ-- ಸೋದರವೂಾವನೊಡಗೂಡಿದ ದುರ್ಯೋಧನನು, ಪಾಂಡವರ ಸಮಾಚಾರವನ್ನು ತರುವುದಾದರೆ ಅರ್ಧ ರಾಜ್ಯವನ್ನು ಕೊಡುತ್ತಾನಂತೆ. ಅಲ್ಲವೆ ಪುತ್ರ?

193 ದುರ್ಯೋಧನ--ಆಹುದು.

194 ದ್ರೋಣ—ಇದನ್ನು (ಪುನಃ) ಎರಡುಮೂರು ಸಲ (ಬೇಕಾದರೂ) ಆಲೋಚಿಸು.

195 ಶಕುನಿ—(ಸ) ಕಾಲದಲ್ಲಿ (ಏನು ಮಾಡಬೇಕೆಂಬುದನ್ನು) ನಾ ಬಲ್ಲೆ.

196 ದ್ರೋಣ—ಸರಿಯಷ್ಟೆ, ಗಾಂಗೇಯ?

3

197 ಭೀಷ್ಮ—(ಆತ್ಮಗತ) ಆಚಾರ್ಯನ ಹರ್ಷವು ಧೈರ್ಯ(ದ ಎಲ್ಲೆ) ಮೀರಿ ಸೂಚಿತವಾಗಿ ಬಿಟ್ಟರೆ ಈಗ ವಂಚಿತನಾಗುತ್ತಿರುವ ದುರ್ಯೋಧನನಿಂದ ಈತ (ನೇ) ವಂಚಿತನಾಗಿಬಿಡುತ್ತಾನೆಂದೇ ಶಂಕಿಸುತ್ತಿದ್ದೇನೆ. [೫೪]

198 (ಪ್ರಕಾಶ) ಪೌತ್ರ ದುರ್ಯೋಧನ, ನನಗೆ ವಿರಾಟನೊಡನೆ ಆಂತರ್ಯವಾದ ವೈರವುಂಟು. ಅಲ್ಲದೆ ನಿನ್ನ ಯಜ್ಞವನ್ನು ಅನುಭವಿಸಲೂ ಅವನು ಬರಲಿಲ್ಲವೆಂಬುದೂ ಒಂದು ಕಾರಣ. ಆದ್ದರಿಂದ ಅವನ ಹಸುಗಳನ್ನು ಹಿಡಿದು (ಬಂಧಿಸಿ) ಬಿಡು.

199 ದ್ರೋಣ—(ಏಕಾಂತವಾಗಿ) ಎಲೌ ಗಾಂಗೇಯ, ಶ್ಲಾಘ್ಯವಾದ ವಿರಾಟೇಶ್ವರ ನನ್ನ ಪ್ರಿಯಶಿಷ್ಯನಲ್ಲವೆ? ಅವನ ಗೋವುಗಳನ್ನು ಬಂಧಿಸುವುದೇಕೆ?

200 ಭೀಷ್ಮ—(ಏಕಾಂತವಾಗಿ) ಋಜುಬುದ್ಧಿಯ ಬ್ರಾಹ್ಮಣನೇ!

201 ನಮ್ಮ ರಥಗಳ ಶಬ್ದದಿಂದಲೇ ಆಘಾತಗೊಂಡವರಾಗಿ ಪಾಂಡವರು ಕೆರಳಿಬಿಡುತ್ತಾರೆ. (ವಿರಾಟನ ಬಗ್ಗೆ) ಅವರಿಗೆ ಕೃತಜ್ಞತೆ ಇದೆ. (ಆದ್ದರಿಂದ) ಗೋಗ್ರಹಣದಲ್ಲಿ ನಮ್ಮ ಇಷ್ಟ(ಸಿದ್ಧಿ) ಇದೆ. [೫೫]

202 (ಪ್ರವೇಶಿಸಿ) ಭಟ—(ನಗರ) ಪ್ರವೇಶಕ್ಕೆ ಅಭಿಮುಖನಾಗಿರುವ ನಿನಗೆ ರಥಗಳೂ ಕುದುರೆಗಳೂ ಸಿದ್ಧವಾಗಿವೆ.

203 ದುರ್ಯೋಧನ—ಇದೇ ರಥಗಳಿಂದಲೇ ಅವನ ಗೋಗ್ರಹಣ ಮಾಡುವುದಾಗಲಿ. ಯಜ್ಞ (ಕಾಲದಲ್ಲಿ) ಪ್ರಶಾಂತವಾಗಿದ್ದ ಗದೆಯೂ ನನ್ನ ಕೈಗೆ ಪುನಃ ಬರುವುದು. [೫೬]

204 ದ್ರೋಣ—ಆದ್ದರಿಂದ ಸಾರಥಿಗಳು ನನ್ನ ರಥವನ್ನು ತರಲಿ.

205 ಶಕುನಿ—........ನನ್ನ ಆನೆಯೂ ತರಲ್ಪಡಲಿ.

206 ಕರ್ಣ—(ಎಂತಹ) ಭಾರವನ್ನೇ ಆಗಲಿ ವಹಿಸಲು ಸದಾ ಉದ್ಯುಕ್ತವಾಗಿರುವ ಕುದುರೆ ಹೂಡಿದ ನನ್ನ ರಥವು ಸಿದ್ಧವಾಗಲಿ.

207 ಭೀಷ್ಮ—ವಿರಾಟನಗರಕ್ಕೆ ಹೋಗಲು ನನ್ನ ಮನಸ್ಸು ತ್ವರೆಗೊಳ್ಳುತ್ತಿದೆ; ನನ್ನ ಧನುಸ್ಸು ಬೇಗ ತರಲ್ಪಡಲಿ.

208 ಎಲ್ಲರೂ—ಧನುಸ್ಸನ್ನು ಇಟ್ಟುಬಿಟ್ಟು ನೀನು ಇಲ್ಲೇ ಇರುವುದಾಗಲಿ. ನಾವೆಲ್ಲ ನಿನ್ನ ಆಜ್ಞಾ ವಿಧೇಯರಾಗಿದ್ದೇವೆ. [೫೭]

[209] ದ್ರೋಣ—ಪುತ್ರ ದುರ್ಯೋಧನ, ನಾವಿಬ್ಬರೂ ನಿನ್ನ ಯುದ್ಧ ಪರಾಕ್ರಮುವನ್ನು ನೋಡಬಯಸುತ್ತೇವೆ.

[210] ದುರ್ಯೋಧನ—ನಿಮ್ಮ ಇಷ್ಟದಂತೆ (ಆಗಲಿ).

[211] ದ್ರೋಣ—ವತ್ಸ ಗಾಂಧಾರರಾಜ! ಈ ಗೋಗ್ರಹಣದಲ್ಲಿ ನಿನ್ನ ರಥವೇ ಮೊದಲನೆಯದು.

[212] ಶಕುನಿ—ಆಗಲಿ. ಅದೇ ಉತ್ತಮ ಕಲ್ಪ.

(ಎಲ್ಲರೂ ಹೋಗುತ್ತಾರೆ)

ಮೊದಲನೆಯ ಅಂಕ ಮುಗಿಯಿತು.

## ಎರಡನೆಯ ಅಂಕ

[1] (ಬಳಿಕ ವೃದ್ಧನಾದ ಗೋಪಾಲಕ ಪ್ರವೇಶಿಸುತ್ತಾನೆ)

[2] ವೃದ್ಧಗೋಪಾಲಕ—ನನ್ನ ಹಸುಗಳು ದಷ್ಟಪುಷ್ಟವಾದ ಕರುಗಳಿಂದ ಕೂಡಿರಲಿ. ಗೋಪಯುವತಿಯರೂ ಎಂದೂ ವಿಧವೆಯರಾಗದಿರಲಿ. ನಮ್ಮ ರಾಜ ವಿರಾಟನು ಏಕಚ್ಛತ್ರಪೃಥಿವೀಪತಿಯಾಗಿರಲಿ. ಮಹಾರಾಜ ವಿರಾಟನ ವರ್ಷವರ್ಧಂತಿಯಲ್ಲಿ ಗೋದಾನ ಮಾಡುವ ನಿಮಿತ್ತದಿಂದ ಈ ನಗರದ ಉಪವನದ ಬೀದಿಯಲ್ಲಿ ಗೋಧನವೂ ಮತ್ತು ಈ ಮಂಗಳದ ಸಂತೋಷಕ್ಕೆ ತಯಾರಾಗಿ ಎಲ್ಲ ಗೋಪ ಬಾಲಕರೂ ಬಾಲಿಕೆಯರೂ ಬಂದು ಸೇರಲಿ. ಇವರಲ್ಲಿ ಹಿರಿತನ ಹೊಂದಿ ನಾನೂ (ಈ ಉತ್ಸವವನ್ನು) ಅನುಭವಿಸುತ್ತೇನೆ. (ನೋಡಿ) ಎನಿದು? ಈ ಕಾಗೆ ಒಣಗಿಹೋದ ಮರವನ್ನು ಹತ್ತಿ, ಒಣ ಕೊಂಬೆಯೊಂದರ ಮೇಲೆ ತನ್ನ ಕೊಕ್ಕನ್ನು ತೀಡುತ್ತಾ ಸೂರ್ಯನಿಗೆ ಅಭಿಮುಖವಾಗಿ ವಿಕಾರವಾದ ಸ್ವರದಿಂದ ಅಳುತ್ತಿದೆ! ಶಾಂತಿಯಿರಲಿ! ನಮಗೂ (ನಮ್ಮ ಗೋಸಂಪತ್ತಿಗೂ ಶಾಂತಿಯಿರಲಿ! ಇಷ್ಟರಲ್ಲೇ ಇವರ ಮೇಲೆ ಯಾಜಮಾನ್ಯ ವಹಿಸಿ ಗೋಪಬಾಲಕರಿಗೂ ಬಾಲಕಿಯರಿಗೂ ಹೇಳಿಬರುತ್ತೇನೆ. (ಸುತ್ತಾಡಿ) ಗೋಮಿತ್ರಕ! ಗೋಮಿತ್ರಕ!

[3] (ಪ್ರವೇಶಿಸಿ) ಗೋಮಿತ್ರಕ—ಮಾವ, ವಂದಿಸುತ್ತೇನೆ.

[4] ವೃದ್ಧಗೋಪಾಲಕ—ಶಾಂತಿಯುಂಟಾಗಲಿ, ನಮಗೂ (ನಮ್ಮ)

ಗೋಸಂಪತ್ತಿಗೂ ಶಾಂತಿಯುಂಟಾಗಲಿ. ಎಲೌ ಗೋಮಿತ್ರಕ, ಮಹಾರಾಜ ವಿರಾಟನ ವರ್ಷ ವರ್ಧಂತಿಯಲ್ಲಿ ಗೋದಾನ ಮಾಡುವ ಸಲುವಾಗಿ ಈ ನಗರದ ಉಪವನದ ಬೀದಿಯೊಳಕ್ಕೆ ಗೋಧನವೂ ಮತ್ತು ಈ ಮಂಗಳದ ಸಂತೋಷಕ್ಕೆ ತಯಾರಾಗಿ ಎಲ್ಲ ಗೋಪಬಾಲಕರೂ ಬಾಲಿಕೆಯರೂ ಬಂದು ಸೇರಲಿ. ಎಲೌ ಗೋಮಿತ್ರಕ, ಗೋಪಬಾಲಕರಿಗೂ ಬಾಲಿಕೆಯರಿಗೂ ತಿಳಿಸು.

5 ಗೋಮಿತ್ರಕ—ಮಾವನ ಅಪ್ಪಣೆಯಂತೆ. ಎಲೌ ಗೋರಕ್ಷಣಿಕೆ, ಘೃತಪಿಂಡ, ಸ್ವಾಮಿನಿ, ವೃಷಭದತ್ತ, ಕುಂಭದತ್ತ, ಮಹಿಷದತ್ತ, ಬನ್ನಿ, ಬನ್ನಿ ಬೇಗ!

6 (ಬಳಿಕ ಎಲ್ಲರೂ ಪ್ರವೇಶಿಸುತ್ತಾರೆ)

7 ಎಲ್ಲರೂ—ಮಾವ, ನಮಸ್ಕರಿಸುತ್ತೇವೆ.

8 ವೃದ್ಧಗೋಪಾಲಕ—ಶಾಂತಿಯುಂಟಾಗಲಿ! ನಮಗೂ (ನಮ್ಮ) ಗೋಸಂಪತ್ತಿಗೂ, ಗೋಪಬಾಲಕರಿಗೂ, ಬಾಲಿಕೆಯರಿಗೂ ಶಾಂತಿಯುಂಟಾಗಲಿ! ಮಹಾರಾಜ ವಿರಾಟನ ವರ್ಷ ವರ್ಧಂತಿಯಲ್ಲಿ ಗೋದಾನ ಮಾಡುವ ಸಲುವಾಗಿ ಈ ನಗರದ ಉಪವನದ ಬೀದಿಯೊಳಕ್ಕೆ ಗೋಸಂಪತ್ತು ಬಂದು ಸೇರಲಿ. ಅಷ್ಟುವೇಳೆ ಹಾಡುತ್ತಾ ಕುಣಿಯುತ್ತಾ ಇರೋಣ.

9 ಎಲ್ಲರೂ—ಮಾವನ ಅಪ್ಪಣೆಯಂತೆ. (ಎಲ್ಲರೂ ಕುಣಿಯುತ್ತಾರೆ)

10 ವೃದ್ಧಗೋಪಾಲಕ—ಹೀ ಹೀ! (ಎಷ್ಟು) ಒಳ್ಳೆ ಕುಣಿತ! (ಎಷ್ಟು) ಒಳ್ಳೆಹಾಡು! ನಾನೂ ಕುಣಿಯುತ್ತೇನೆ.

11 ಎಲ್ಲರೂ—ಹಾ ಹಾ! ಮಾವ! ಬಹಳ ದೊಡ್ಡದಾಗಿ ಧೂಳು ಏಳುತ್ತಿದೆ!

12 ವೃದ್ಧಗೋಪಾಲಕ—ಧೂಳು ಮಾತ್ರವಲ್ಲ, ಶಂಖ ದುಂದುಭಿಗಳ ಘೋಷವೂ ಏಳುತ್ತಿದೆ.

13 ಎಲ್ಲರೂ—ಹಗಲಿನ ಚಂದ್ರನ ಪ್ರಭೆಯಂತೆ ಮಸಕಾದ ಪ್ರಕಾಶದಿಂದ ಮರೆಯಾದ ಬಿಂಬವುಳ್ಳ ಸೂರ್ಯನು ಇದ್ದಾನೋ ಇಲ್ಲವೋ (ಎನ್ನುವಂತಾಗಿದೆ).

14 ಗೋಮಿತ್ರಕ—ಹಾ ಹಾ ಮಾವಾ! ಇದೋ ಯಾರೋ ಕೆಲವು ಮನುಷ್ಯರು ಮೊಸರಿನ ಗರಣೆಯಂತೆ ಬಿಳುಪಾದ ಛತ್ರಿಗಳೊಡನೆ ಕುದುರೆ ಗಾಡಿಗಳ ಮೇಲೇರಿ ನಮ್ಮ ಹಳ್ಳಿಯೊಳಗೆಲ್ಲ ಓಡಾಡುತ್ತಿದ್ದಾರೆ, ಕಳ್ಳರು!

[15] ವೃದ್ಧಗೋಪಾಲಕ—ಹೇ ಹೇ, ಬಾಣ ಬಿಡುವುದೂ ನಡೆದಿದೆ! ಬಾಲಕರೆ, ಬಾಲಕಿಯರೆ, ಬೇಗ ಗುಡಿಸಿಲನ್ನು ಪ್ರವೇಶಿಸಿರಿ.

[16] ಎಲ್ಲರೂ—ಮಾವನ ಅಪ್ಪಣೆಯಂತೆ.

[17] ವೃದ್ಧಗೋಪಾಲಕ—ಹಾ ಹಾ! ತಾಳಿರಿ, ತಾಳಿರಿ! ಹೊಡೆಯಿರಿ, ಹೊಡೆಯಿರಿ! ಹಿಡಿಯಿರಿ, ಹಿಡಿಯಿರಿ! ಈ ವೃತ್ತಾಂತವನ್ನು ಮಹಾರಾಜ ವಿರಾಟನಿಗೆ ಅರಿಕೆ ಮಾಡೋಣ.

( ಹೋಗುತ್ತಾನೆ )

[18] ಪ್ರವೇಶಕ

[19] (ಬಳಿಕ ಭಟನು ಪ್ರವೇಶಿಸುತ್ತಾನೆ)

[20] ಭಟ—ಎಲ್ಲೈ, ತಿಳಿಸಿರಿ ತಿಳಿಸಿರಿ, ಮಹಾರಾಜ ವಿರಾಟೇಶ್ವರನಿಗೆ ತಿಳಿಸಿರಿ—ಈ (ನಮ್ಮ) ಹಸುಗಳು ದಸ್ಯುಕರ್ಮದಿಂದ (ತಮ್ಮ) ಪರಾಕ್ರಮವನ್ನು ಮರೆಯಿಸಿಕೊಂಡಿರುವ ಧೃತರಾಷ್ಟ್ರನ ಕಡೆಯವರಿಂದ ಅಪಹರಿಸಲ್ಪಡುತ್ತಿವೆ, ಎಂದು; ಮತ್ತೂ ಅಲ್ಲಿ

[21] ಓಡುತ್ತಿರುವ ಕರುಗಳಿಂದಲೂ ವ್ಯಥೆಗೊಂಡ ಗೋವುಗಳ ಮಂದೆಗಳಿಂದಲೂ ನಿರೀಕ್ಷಿಸಿದುದರಿಂದಲೇ ಬೆದರಿದ ಮುಖಗಳುಳ್ಳ ವೃಷಭಗಳಿಂದಲೂ ಮಾಡಲ್ಪಟ್ಟ ಆರ್ತನಾದದಿಂದ ಎಲ್ಲಕಡೆಯೂ ಕಳವಳಗೊಂಡ ಹಸುಗಳ ಒಟ್ಟು ಸಮೂಹವೇ ತುಂಬ ವ್ಯಾಕುಲಕ್ಕೊಳಗಾಗಿ ಶೋಚನೀಯವಾಗಿಬಿಟ್ಟದೆ. [೧]—ಎಂದೂ (ಹೇಳಿ).

[22] (ತೆರೆಯ ಹಿಂದೆ) 'ಧೃತರಾಷ್ಟ್ರನ ಕಡೆಯವರಿಂದ' ಎಂದೆಯಾ?

[23] ಭಟ—ಆರ್ಯ, ಹೌದು.

[24] (ಪ್ರವೇಶಿಸಿ) ಕಾಂಚುಕೀಯ—ಭ್ರಾತೃಜನರಿಗೂ ದ್ರೋಹಿಗಳಾಗಿರುವ ಅವರಿಗೆ ಇದು ಸದೃಶವಾದದ್ದೇ!

[25] ಕೈ ಮಣಿಕಟ್ಟಿಗೆ ಗೋಧೆಯನ್ನೂ ಬೆರಳುಗಳಿಗೆ ಅಂಗುಲಿತ್ರಗಳನ್ನೂ ಕಟ್ಟಿಕೊಂಡಿರುವ, ಲೋಹ ಕವಚಗಳಿಂದ (ಮೈ)ಮುಚ್ಚಿಕೊಂಡಿರುವ, ಸಿದ್ಧವಾದ ರಥಗಳಲ್ಲಿ ಕುಳಿತಿರುವ, (ತಮ್ಮ) ಪರಾಕ್ರಮದಿಂದ ಉತ್ಸಿಕ್ತರೂ

ಯುದ್ಧಸನ್ನದ್ಧರೂ ಅಸ್ತ್ರ(ಪ್ರಯೋಗ)ದಲ್ಲಿ ಪಳಗಿದವರೂ ಆದ ಇವರು ಸಜ್ಜಾದ ಧನಸ್ಸುಗಳಿಂದ ರಾಜನ ಮೇಲಿನ ವೈರವನ್ನು ಗೋವುಗಳ ಮೇಲೆ ತೀರಿಸಿಕೊಳ್ಳುತ್ತಿದ್ದಾರೆ. [೨]

26 ಜಯಸೇನ, ಜನ್ಮ ನಕ್ಷತ್ರಕ್ಕೆ ಸಂಬಂಧಿಸಿದ ಕೆಲಸಗಳಲ್ಲಿ ವ್ಯಾಪೃತನಾಗಿರುವ ಮಹಾರಾಜನಿಗೆ ಅಕಾಲದಲ್ಲಿ ಅರಿಕೆ ಮಾಡುವುದಾದರೋ ಕೋಪವನ್ನುಂಟುಮಾಡುತ್ತದೆ. ಆದ್ದರಿಂದ ಪುಣ್ಯಾಹ ಮುಗಿದಮೇಲೆ ಅರಿಕೆ ಮಾಡುತ್ತೇನೆ.

27 ಭಟ—ಆರ್ಯ, ತೀರ ತುರ್ತಿನ ಕೆಲಸವಿದು. ಬೇಗ ಅರಿಕೆಮಾಡು.

28 ಕಾಂಚುಕೀಯ—ಈಗಲೇ ಅರಿಕೆಮಾಡಲಾಗುತ್ತದೆ.

29 (ಬಳಿಕ ರಾಜನು ಪ್ರವೇಶಿಸುತ್ತಾನೆ)

30 ರಾಜ—ಬಿಡು, ಬಿಡು! ರಥಗಳ ಸದ್ದಿನ ಹೆದರಿಕೆಯಿಂದಲೇ ವ್ಯಥೆಗೊಂಡು ಚೆಲ್ಲಾಪಿಲ್ಲಿಯಾದ ಎಳೆಯ ಕರುಗಳುಳ್ಳ ನನ್ನ ಹಸುಗಳು ಅಪಹರಿಸಲ್ಪಡುತ್ತಿವೆ; ಹಾಗಿದ್ದೂ, ತುಂಬಿದ ಭುಜಗಳು ಸರಿದಾಡುವ ಬಳೆ ಇವುಗಳುಳ್ಳ, (ಪೂಸಿದ) ಚಂದನದಿಂದ ಕೂಡಿ (ಇನ್ನೂ) ತೇವವಾಗಿಯೇ ಇರುವ (ಈ) ನನ್ನ ಕೈಯು ಲಜ್ಜೆಯಿಲ್ಲದೆ ತೆರಿಗೆಗಳನ್ನು ತೆಗೆದುಕೊಳ್ಳುತ್ತಿದೆ! [೩]

31 ಜಯಸೇನ! ಜಯಸೇನ!

32 (ಪ್ರವೇಶಿಸಿ) ಭಟ—ಜಯವಾಗಲಿ! ಮಹಾರಾಜನಿಗೆ ಜಯವಾಗಲಿ!

33 ರಾಜ—'ಮಹಾರಾಜ' ಎಂಬ ಶಬ್ದ ಇನ್ನು ಸಾಕು. ನನ್ನ ಕ್ಷತ್ರಿಯತ್ವವೇ (ಗಾಳಿಯಲ್ಲಿ) ತೂರಿಹೋಗಿದೆ. ಯುದ್ಧದ ವಿವರಗಳು ಹೇಳಲ್ಪಡಲಿ.

34 ಭಟ-ಅಪ್ರಿಯವಾದವು ವಿಸ್ತಾರಕ್ಕೆ ತಕ್ಕವಲ್ಲ. ಒಟ್ಟು ಸಾರಾಂಶ ಇದು-

35 ರಥಗಳ ಧೂಳಿನಿಂದ ಹಸುಗಳ ಶರೀರಗಳೆಲ್ಲಾ ಒಂದೇ ಬಣ್ಣವಾಗಿರಲಾಗಿ ಚಾವಟಿಯ ಏಟು ಬಿದ್ದ ಸ್ಥಳಗಳಲ್ಲಿ ಮಾತ್ರ ನಾನಾ ಬಣ್ಣಗಳ ವ್ಯತ್ಯಾಸಗಳು ಕಾಣಿಸುತ್ತಿವೆ. [೪]

36 ರಾಜ—ಹಾಗಾದರೆ

37 ಬೇಗ ಧನುಸ್ಸನ್ನು ತೆಗೆದುಕೊಂಡು ಬಾ; ನನ್ನ ರಥವು ಸಜ್ಜಾಗಲಿ; ಯಾರಿಗೆ ಭಕ್ತಿಯಿದೆಯೋ ಅವನು ತನ್ನ ಇಷ್ಟದಂತೆ ನನ್ನ ಮುನ್ನಡೆ

ಯನ್ನನುಸರಿಸಿ ಬರಲಿ. ಗೋವುಗಳ ಸಲುವಾಗಿ ಯುದ್ಧರಂಗದ ಮುನ್ನಾಲಿ ನಲ್ಲಿ ಮಾಡುವ ಪ್ರಯತ್ನ ವ್ಯರ್ಥವಲ್ಲ; ಸತ್ತುಹೋದರೆ ಯಶಸ್ಸು ಲಭಿಸೀತು; (ಗೋವುಗಳನ್ನು) ವಿಮೋಚನಗೊಳಿಸಿದರಂತು ಧರ್ಮವಿದ್ದೇ ಇದೆ. [೫]

38 ಭಟ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

39 ರಾಜ—ಎಲೌ, ನನ್ನ ವಿಷಯದಲ್ಲಿ ದುರ್ಯೋಧನನಿಗೆ ಅದೇತಕ್ಕಾಗಿ ವೈರ? ಓಹೋ! ಯಜ್ಞಕ್ಕೆ ಬರಲಿಲ್ಲವೆಂದಿರಬೇಕು. ಹೇಗೆ ತಾನೆ (ಆ ಯಜ್ಞದ ಉತ್ಸವವನ್ನು) ನಾನು ಅನುಭವಿಸಬಹುದಾಗಿತ್ತು? ಕೀಚಕರ ವಿನಾಶದಿಂದ ನಾವು ಸಂತಾಪಕ್ಕೊಳಗಾಗಿ ಬಿಟ್ಟಿದ್ದೆವು. ಅಥವಾ, ಇದು ಪರೋಕ್ಷವೇ ಆಗಿದ್ದರೂ ಪಾಂಡವರ ಸ್ನೇಹಿತನೆಂದಿರಬೇಕು. ಹೇಗಾದರೂ (ಈಗ) ಯುದ್ಧ ಮಾಡಲೇಬೇಕು. ಹಸ್ತಿನಪುರದಲ್ಲಿ ವಾಸವಾಗಿದ್ದುದರಿಂದ ಭಗವಾನನು ದುರ್ಯೋಧನನ ನಡತೆಯನ್ನು ಬಲ್ಲವನು. ಅಥವಾ

40 ಈತನು ಪ್ರಾಯಃ ದುರ್ಯೋಧನನ ದೋಷವನ್ನು ತಿಳಿಸುವುದಿಲ್ಲ. ಆದರೂ ಅಗತ್ಯವಿರುವುದರಿಂದ ಕಾರ್ಯಶೀಲನಾದವನು ಶ್ರಾಂತನಾಗದೆ ಕೇಳಿಯೇ ಕೇಳುತ್ತಾನಲ್ಲವೆ? [೬]

41 ಯಾರಲ್ಲಿ?

42 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ.

43 ರಾಜ—ಭಗವಾನನನ್ನು ಕರೆದುಕೊಂಡು ಬಾ.

44 ಭಟ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

45 (ಭಗವಾನನು ಬಳಿಕ ಪ್ರವೇಶಿಸುತ್ತಾನೆ)

46 ಭಗವಾನ್—(ಎಲ್ಲ ಕಡೆಯೂ ನೋಡಿ) ಎಲೌ ಏನಿದು?

47 ಗಜೇಂದ್ರಗಳು ಸಜ್ಜುಗೊಳಿಸಲ್ಪಡುತ್ತಿವೆ. ಶ್ರೇಷ್ಠವಾದ ಕುದುರೆ ಗಳು ಕವಚಗಳಿಂದ ಅಳವಡಿಸಲ್ಪಟ್ಟಿವೆ; ರಥಗಳು (ಬಿಗಿಮಾಡಿದ) ಇರಚಿ ಮರಗಳಿಂದ ಕೂಡಿವೆ. ಯೋಧಪುರುಷರು ಸೊಂಟಕಟ್ಟಿ ನಿಂತಿದ್ದಾರೆ. (ಈ) ಸನ್ನಾಹವನ್ನು ಕಂಡು ಹಿಂದೆಂದೂ ಆಗದ ಭಯ (ಈಗ) ನನಗಾಗುತ್ತಿದೆ; ನನ್ನ ಬಗ್ಗೆ ಅಲ್ಲ; ನಾನೇನೋ ಗಟ್ಟಿಮನಸ್ಸಿನವನು. ಆದರೆ ಅವರು (ನನ್ನ ತಮ್ಮಂದಿರು) ಚಪಲರು. [೭]

48 (ಹತ್ತಿರ ಬಂದು) ಜಯವಾಗಲಿ, ನಿನಗೆ ಜಯವಾಗಲಿ!

49 ರಾಜ—ಜಯವಾಗಲಿ, ಭಗವಾನನಿಗೆ ಜಯವಾಗಲಿ! ಭಗವಂತನೇ, ವಿರಾಟನು ಅಭಿವಾದನ ಮಾಡುತ್ತಾನೆ.

50 ಭಗವಾನ್—ಸ್ವಸ್ತಿ.

51 ರಾಜ—ಭಗವಂತನೆ, ಈ ಆಸನವನ್ನಲಂಕರಿಸು.

52 ಭಗವಾನ್—(ಕುಳಿತುಕೊಂಡು) ಎಲೈ ರಾಜನೇ,

53 ರಣಸನ್ನಾಹ ಏತಕ್ಕಾಗಿ ನಡೆದಿದೆ? ಐಶ್ವರ್ಯ ಸಂತೋಷವನ್ನು ಬಯಸುತ್ತಿಲ್ಲವೇ? ಇದೇನು ಉತ್ಸಿಕ್ತರನ್ನು ಪೀಡಿಸುವುದೋ, (ಅಥವಾ) ಪೀಡಿತರಾದವರನ್ನು ಬಿಡುಗಡೆ ಮಾಡುವುದೋ? [೮]

54 ರಾಜ—ಭಗವಂತನೆ, ಗೋಗ್ರಹಣದಿಂದ ಅಪಮಾನಿತನಾಗಿದ್ದೇನೆ.

55 ಭಗವಾನ್—ಯಾರಿಂದ (ಆದುದು)?

56 ರಾಜ—ಧೃತರಾಷ್ಟ್ರನ ಮಕ್ಕಳಿಂದ.

57 ಭಗವಾನ್—(ಆತ್ಮಗತ) ಆಹಾ! ಕಷ್ಟ!

58 ಲೋಕದಲ್ಲಿ ಏಕೋದಕತ್ವವು ಸರಳಮನಸ್ಸಿನ ಜನರ ಮನಸ್ಸನ್ನು ನಡುಗಿಸಿ ಬಿಡುತ್ತದೆಂಬುದು ನಿಜ. ವೈರಪ್ರಿಯರಾದ ಅವರಿಂದ ಅಪರಾಧವಾಗಿದ್ದರೂ ನಿಜವಾಗಿಯೂ ನಮ್ಮಿಂದಲೇ ಅಪರಾಧವಾದಂತಿದೆ. [೯]

59 ರಾಜ—ಭಗವಂತನೇ, ಈಗ ಯೋಚಿಸುತ್ತಿರುವುದೇನನ್ನು?

60 ಭಗವಾನ್—ಏನೂ ಇಲ್ಲ. ಅವರ ಬಗ್ಗೆ ಕಾತರನಾಗಿದ್ದೇನೆ.

61 ರಾಜ—ಈದಿನ ಮೊದಲುಗೊಂಡು ಅವರು ಉಡುಗಿಹೋಗುತ್ತಾರೆ. ಶಕ್ತನೇ ಆಗಿದ್ದರೂ, ಯಧಿಷ್ಠಿರನೇನೋ ಸಹಿಸಿಕೊಂಡಿದ್ದಾನೆ; ನಾನು ಸಹಿಸುವುದಿಲ್ಲ.

62 ಭಗವಾನ್—(ಆತ್ಮಗತ) 63 ನನ್ನ ತಾಳ್ಮೆ (ಇತರರಿಗೆ) ಅರಿವಾಗುತ್ತದೆಯಾದ್ದರಿಂದ, ಇದೀಗ, (ನಮ್ಮ) (ಬರೀ) ನೆಲದಮೇಲಿನ ಪರ್ಣಶಯ್ಯೆ, ರಾಜ್ಯಭ್ರಂಶ, ದ್ರೌಪದಿಗಾದ ಅಪಮಾನ, ಬೇರೆ ವೇಷತಾಳಿದ್ದು, ಪರಾಶ್ರಯದಲ್ಲಿ ವಾಸ,—ಇವೆಲ್ಲವೂ ಶ್ಲಾಘ್ಯವೇ! [೧೦]

64 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ.

65 ರಾಜ—ದುರ್ಯೋಧನನೀಗ ಏನು ಮಾಡುತ್ತಿದ್ದಾನೆ?

66 ಭಟ—ದುರ್ಯೋಧನ ಮಾತ್ರವಲ್ಲ, ಭೂಮಿಯ ಮೇಲಿನ ಎಲ್ಲ ರಾಜರೂ ಬಂದಿದ್ದಾರೆ.

67 ದ್ರೋಣ, ಭೀಷ್ಮ, ಜಯದ್ರಥ, ಶಲ್ಯ, ಅಂಗರಾಜ (ಕರ್ಣ), ಶಕುನಿ, ಕೃಪ,—ಇವರ ರಥಗಳ ಕುಲುಕಾಟದಿಂದಲೇ ಹಾರಾಡುವ ಪತಾಕೆಗಳುಳ್ಳ ಧ್ವಜಗಳಿಂದಲೇ ನಾವು ಭಗ್ನರಾಗಿ ಬಿಟ್ಟದ್ದೇವೆ; (ಅವರ) ಬಾಣದಿಂದ (ಅಷ್ಟಾಗಿ) ಅಲ್ಲ. [೧೧]

68 ರಾಜ—(ಎದ್ದುನಿಂತು ಕೈಮುಗಿದುಕೊಂಡು) ಏನು? ಪೂಜ್ಯನಾದ ಗಾಂಗೇಯನೂ ಬಂದಿದ್ದಾನೆಯೆ?

69 ಭಗವಾನ್—(ಆತ್ಮಗತ) ಭಲೆ! ಅಪಮಾನಿತನಾಗಿದ್ದರೂ ನಡವಳಿಕೆಯನ್ನು ಮೀರಲಿಲ್ಲ! ಎಲಾ,

70 ಕುರುರಾಜರ ಉತ್ತಮ ಗುರು (ಭೀಷ್ಮನು) ಇದೇತಕ್ಕಾಗಿ ಇಲ್ಲಿಗೆ ಬಂದಿದ್ದಾನೆ? (ನನ್ನ) ಪ್ರತಿಜ್ಞೆ ತೀರಿತೆಂದು ನನಗೆ ನೆನಪುಂಟುಮಾಡಿಕೊಡಲಾಗುತ್ತಿದೆಯೆಂದು ಭಾವಿಸುತ್ತೇನೆ. [೧೨]

71 ರಾಜ—ಯಾರಲ್ಲಿ?

72 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ.

73 ರಾಜ—ಸೂತನನ್ನು ಕರೆ.

74 ಭಟ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

75 (ಪ್ರವೇಶಿಸಿ) ಸೂತ—ಆಯುಷ್ಮಂತನಿಗೆ ಜಯವಾಗಲಿ.

76 ರಾಜ—ನನ್ನ ರಥವನ್ನು ಬೇಗ ತಾ; ಶ್ಲಾಘ್ಯನಾದ ರಣಾತಿಥಿ ದೊರೆತಿದ್ದಾನೆ. (ನನ್ನ) ಬಾಣಗಳಿಂದ ಭೀಷ್ಮನನ್ನು ಸಂತೋಷಪಡಿಸುತ್ತೇನೆ; ಜಯಿಸುತ್ತೇನೆಂಬುದು ಈಡೇರಲಾರದ ಮನೋರಥ. [೧೩]

77 ಸೂತ—ಆಯುಷ್ಮಂತನ ಅಪ್ಪಣೆಯಂತೆ. ಆಯುಷ್ಮಂತನೇ!

78 ಶತ್ರುಗಳ ಸೈನ್ಯವಿಭೇದನ ಕಾರ್ಯಗಳಲ್ಲಿ ನಿನಗೆ ಯಾವ ರಥ ಬಳಕೆಯಾಗಿತ್ತೋ ಆ ರಥದಲ್ಲಿ ಕುಳಿತು ಉತ್ತರ (ಕುಮಾರನು) ಹೊರಟುಹೋಗಿದ್ದಾನೆ, (ತಾನು) ರಥದಲ್ಲಿ ಹೋಗುವುದನ್ನು ಮೆರೆಯಿಸುವುದಕ್ಕಾಗಿ. [೧೪]

79 ರಾಜ—ಏನು? ಕುಮಾರ ಹೊರಟುಬಿಟ್ಟನೆ?

80 ಭಗವಾನ್—ರಾಜನೇ! ತಡೆ, ರಾಜಕುಮಾರ ಹೋಗುವುದನ್ನು ತಡೆ.

81 ಸಾಧಕಬಾಧಕಗಳನ್ನು ಗಣನೆಗೆ ತೆಗೆದುಕೊಳ್ಳದೆ ಬಾಲ್ಯದ ಕಾರಣದಿಂದ ಯುದ್ಧದಲ್ಲಿ ದುಡುಕುತ್ತಿದ್ದಾನೆ. ಯುದ್ಧದ ಅಗ್ನಿ ತೀರ ಹತ್ತಿರ

ಬಂದಾಗ ಯಾರನ್ನೂ ಸುಡದೆ ಬಿಡುವುದಿಲ್ಲ. ಅದೂ ಅಲ್ಲದೆ ಧೃತರಾಷ್ಟ್ರನ ಮಕ್ಕಳು ಯಾವುದಕ್ಕೂ ಹೇಸುವವರಲ್ಲ. ನಿನಗೆ ಯಾವ ಪರಿಭವವನ್ನೂ ಎಣಿಸದೆ, ಯುದ್ಧದ ದೋಷಗಳನ್ನು ಹೇಳುತ್ತಿದ್ದೇನೆ; ಅಷ್ಟೆ. [೧೫]

82 ರಾಜ— ಹಾಗಾದರೆ ಬೇರೊಂದು ರಥ ಸಜ್ಜಾಗಲಿ.

83 ಸೂತ—ಆಯುಷ್ಮಂತನ ಅಪ್ಪಣೆಯಂತೆ.

84 ರಾಜ—ಅಥವಾ, ಇಲ್ಲಿ ಬಾ.

85 ಸೂತ—ಆಯುಷ್ಮಂತನೆ, ಇದೋ ಬಂದಿದ್ದೇನೆ.

86 ರಾಜ—ನೀನೇಗ ಕುಮಾರನ ರಥವನ್ನೇಕೆ ನಡೆಸ(ಲು ಹೋಗ)ಲಿಲ್ಲ? (ಅದಕ್ಕೆ) ಅವನು ಅನುಮತಿಯಿತ್ತನೆ? (ಈ) ರಾಜಕುಲಕ್ಕೇ ನೀನು ಸಾರಥಿಯಲ್ಲವೆ? [೧೬]

87 ಸೂತ—ಆಯುಷ್ಮಂತನು ಪ್ರಸನ್ನನಾಗಬೇಕು. ರಥವನ್ನು ಸಜ್ಜುಗೊಳಿಸಿ, ಸೂತನ ನಡವಳಿಕೆಯಂತೆ ನಾನು ಹಾಜರಿದ್ದೆ. (ಆದರೆ) ಕುಮಾರನಿಂದ

88 ಆದೇನು ಅವಳ ಪರಿಹಾಸಕ್ಕಾಗಿಯೋ, ಅಥವಾ ಅವಳಲ್ಲಿ ಕೌಶಲವೇ ಇದೆಯೋ, ನನ್ನನ್ನು ತಪ್ಪಿಸಿ, ಬೃಹನ್ನಳೆ ಸಾರಥ್ಯಕ್ಕೆ ನೇಮಿತಳಾದಳು. [೧೭]

89 ರಾಜ—ಏನು? ಬೃಹನ್ನಳೆಯೆ?

90 ಭಗವಾನ್—ರಾಜನೇ, ಗಾಬರಿ ಬೇಡ.

91 ತನ್ನ ಚಕ್ರದಿಂದಲೇ ಮೇಲೆದ್ದ ಧೂಳಿನ ಮೋಡದಿಂದ ಕೂಡಿದ ರಥದಲ್ಲಿ ಕುಳಿತು ಬೃಹನ್ನಳೆ ಹೋಗಿರುವಳಾದರೆ, ಶತ್ರುಗಳನ್ನು ಕ್ಷಣಮಾತ್ರದಲ್ಲಿ ಚಕ್ರದ ಪುಟ್ಟಮರದ ಶಬ್ದದಿಂದಲೇ ಹೊರದೂಡುತ್ತಾ, ಬಾಣಪ್ರಯೋಗ ಇಲ್ಲದೆಯೇ, ರಥವೇ ಜಯಿಸುತ್ತದೆ. [೧೮]

92 ರಾಜ—ಹಾಗಾದರೆ ಬೇಗ ಬೇರೊಂದು ರಥ ಸಜ್ಜಾಗಲಿ.

93 ಸೂತ—ಆಯುಷ್ಮಂತನ ಅಪ್ಪಣೆಯಂತೆ. (ಹೋಗುತ್ತಾನೆ)

94 (ಪ್ರವೇಶಿಸಿ) ಭಟ—ಕುಮಾರನ ರಥ ಕಕ್ಕಾವಿಕ್ಕಿಯಾಗಿಬಿಟ್ಟಿತು.

95 ರಾಜ—ಕಕ್ಕಾವಿಕ್ಕಿಯಾಯಿತೆಂದರೇನು?

96 ಭಟ—ಮಹಾರಾಜನು ಆಲಿಸಬೇಕು.

97 ಯುದ್ಧವಿಶಾರದರಾದ ಅನೇಕ ಶತ್ರುಗಳಿಂದ (ರಥದ) ಕುದುರೆಗಳ

ಮಾರ್ಗವು ಮುತ್ತಲ್ಪಟ್ಟು, ರಥ (ಮುಂದೆ ಸಾಗದೆ) ಕಕ್ಕಾವಿಕ್ಕಿಯಾಗಿ, ದಟ್ಟವಾದ ಕಾಡಿನ (ಕಡೆ ಸಾಗುವ) ಆಸೆಯಿಂದ ಶ್ಮಶಾನಾಭಿಮುಖವಾಯಿತು. [೧೯]

98 ಭಗವಾನ್— (ಆತ್ಮಗತ) ಓಹೋ! ಇಲ್ಲೇ ತಾನೆ ಗಾಂಡೀವ(ವಿಟ್ಟದ್ದುದು)! (ಪ್ರಕಾಶ) ರಾಜನೇ,

9 ರಥವು ಶ್ಮಶಾನಾಭಿಮುಖವಾಗಿರಲು ಒಂದು ಶುಭ ಶಕುನ ಉಂಟಾಗಿದೆ ಧೃತರಾಷ್ಟ್ರನ ಮಕ್ಕಳು ಎಲ್ಲಿದ್ದಾರೋ ಅದು ಶ್ಮಶಾನವಾಗಿ ಬಿಡುತ್ತದೆ. [೨೦]

100 ರಾಜ—ಭಗವನ್, ಅಕಾಲದಲ್ಲಿ (ಆಡುವ) ಸಮಾಧಾನದ ಮಾತು ಕೋಪವುಂಟುಮಾಡುತ್ತದೆ.

101 ಭಗವಾನ್—ಕೋಪ ಬೇಡ. ಹಿಂದೆಂದೂ (ನನ್ನಿಂದ) ಸುಳ್ಳು ಆಡಲ್ಪಟ್ಟಿಲ್ಲ.

102 ರಾಜ—ಸರಿ, ಅದು ನಿಜ. ಹೋಗು; ಮುಂದಿನ ವೃತ್ತಾಂತ ತಿಳಿ.

103 ಭಟ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

104 ರಾಜ—ಕ್ಷಣಮಾತ್ರದಲ್ಲಿ ಇದ್ದಕ್ಕಿದ್ದಂತೆ ಉಂಟಾಗಿರುವ ಈ ಧ್ವನಿ ಯಾವುದಿರಬಹುದು? (ದಡಕ್ಕೆ) ಅಪ್ಪಳಿಸುವ ನದಿಯ ತುಂಬು ಪ್ರವಾಹದಂತೆ ಭೂಮಿಯನ್ನೇ ನಡುಗಿಸುತ್ತಿರುವಂತಿದೆ. [೨೧]

105 (ಅದೇನು ಶಬ್ದ) ತಿಳಿ.

106 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ! ಮುಹೂರ್ತ ಕಾಲ ಕುದುರೆಗಳು ವಿಶ್ರಾಂತಿ ಹೊಂದಿದ ಬಳಿಕ ಕುಮಾರನು ಶ್ಮಶಾನದಿಂದ....

107 ಭಗವಾನ್—ಇದು ನನ್ನನ್ನು ಸುಳ್ಳುಗಾರನನ್ನಾಗಿ ಮಾಡದಿರಬೇಕು.

108 ರಾಜ—ಕುಮಾರನು ಏನು ಮಾಡಿದ?

109 ಭಟ—ಕಪ್ಪಗಿದ್ದ ಆನೆಗಳೆಲ್ಲ ನೂರಾರು ಬಾಣಗಳ ಪ್ರಯೋಗದಿಂದ ಎಣ್ಣೆಗೆಂಪುಬಣ್ಣಕ್ಕೆ ತಿರುಗಿಸಲ್ಪಟ್ಟವು. ನೂರು ಬಾಣಗಳ ಹೊಡೆತವನ್ನಾದರೂ ತಾಳದ ಕುದುರೆಯಾಗಲಿ ಯೋಧನಾಗಲಿ ಇಲ್ಲವೇ ಇಲ್ಲ. ಬಾಣಗಳಿಂದ ಸಜ್ಜಾಗಿದ್ದ ಉತ್ತಮ ರಥಗಳೂ ಬಾಣಗಳಿಂದ ಸ್ತಂಭೀಭೂತವಾಗಿಬಿಟ್ಟವು. ಮಾರ್ಗಗಳು ಬಾಣಗಳಿಂದ ಮುಚ್ಚಿಹೋದುವು. ಧನುಸ್ಸು ಉಗ್ರವಾದ ಬಾಣಗಳ ನದಿಯನ್ನೇ ಹರಿಸುತ್ತಿತ್ತು. [೨೨]

110 ಭಗವಾನ್—(ಆತ್ಮಗತ) ಖಾಂಡವ(ದಹನ ಕಾಲ)ದಲ್ಲಿ ಇಂದ್ರನಿಂದ ಎಷ್ಟು (ಮಳೆಯ) ಧಾರೆಗಳು ಸುರಿಸಲ್ಪಟ್ಟುವೋ ಅಷ್ಟೇ (ಸಂಖ್ಯೆಯಲ್ಲಿ) ಬಾಣಗಳೂ ಪ್ರಯೋಗಿಸಲ್ಪಡಲು ಯಾವುದರಿಂದ (ಅರ್ಜುನನಿಗೆ) ಸಾಧ್ಯವಾಯಿತೋ, ಆ ಅಕ್ಷಯವಾದ ಬತ್ತಳಿಕೆಯ ಪ್ರಭಾವ ಇದು. [೨೩]

111 ರಾಜ—ಆಮೇಲೆ, ಶತ್ರುಗಳಲ್ಲಿ ಈಗೇನು ನಡೆದಿದೆ?

112 ಭಟ—ಅದು ನನಗೆ ಪ್ರತ್ಯಕ್ಷ (ಗೋಚರ)ವಲ್ಲ. ವರದಿಗಾರರು ಹೇಳುತ್ತಾರೆ—

113 ದ್ರೋಣನು ಧನುರ್ಘೋಷವನ್ನು (ಕೇಳಿ) ಇದು ಅದೇ ಎಂದು ಭಾವಿಸಿ ಹಿಂದಿರುಗಿದನು. ಧ್ವಜದಲ್ಲಿ ಬಾಣವನ್ನು ಕಂಡು ಭೀಷ್ಮನು 'ಸಾಕು' ಎಂದು ಹೊಡೆಯುವುದನ್ನು ನಿಲ್ಲಿಸಿಬಿಟ್ಟನು. ಕರ್ಣನು ಬಾಣಗಳಿಂದ ಅಪ್ರತಿಭನಾದನು. ಇತರ ರಾಜರೂ ಇದೇನೆಂದು (ಬೆರಗಾದರು). (ಇಂತಹ) ಭಯದಲ್ಲೂ ಒಬ್ಬನೇ ಒಬ್ಬ ಅಭಿಮನ್ಯು, ಬಾಲ್ಯದ ಕಾರಣದಿಂದ, ಭಯವನ್ನು ಗಣನೆಗೇ ತೆಗೆದುಕೊಂಡಿಲ್ಲ. [೨೪]

114 ಭಗವಾನ್—ಏನು? ಅಭಿಮನ್ಯು ಬಂದಿದ್ದಾನೆಯೆ? ರಾಜನೇ,

115 ಎರಡು ವಂಶಗಳಿಗೂ ತೇಜೋಮಯವಾದ ಅಗ್ನಿಯಂತಿರುವ ಅಭಿಮನ್ಯು (ಸುಭದ್ರೆಯ ಮಗ) ಯುದ್ಧ ಮಾಡುತ್ತಿರುವುದಾದರೆ ಬೇರೆ ಸಾರಥಿಯು ಕಳುಹಿಸಲ್ಪಡಲಿ; ಈ ಸಂದರ್ಭದಲ್ಲಿ ಬೃಹನ್ನಳೆ ತಬ್ಬಿಬ್ಬಾಗಿಬಿಡುತ್ತಾಳೆ. [೨೫]

116 ರಾಜ—ನೀನು ಹಾಗೆಣಿಸಲೇ ಬಾರದು.

117 ಪರಶುರಾಮನ ಬಾಣಗಳಿಂದಲೂ ಭೇದಿಸಲ್ಪಡದ ಕವಚವುಳ್ಳ ಭೀಷ್ಮನನ್ನೂ ಮಂತ್ರಾಯುಧನಾದ ದ್ರೋಣನನ್ನೂ ಕರ್ಣ ಜಯದ್ರಥರನ್ನೂ ಇನ್ನೂ ಉಳಿದ ಬೇರೆ ಬೇರೆ ರಾಜರನ್ನೂ ಹಿಂದಿರುಗುವಂತೆಮಾಡಿ, ತನ್ನ ಬಾಣಗಳಿಂದ ಸೌಭದ್ರನನ್ನು ಮಾತ್ರ, ಅವನ ತಂದೆಯ ಪ್ರಭಾವಕ್ಕೆ ಹೆದರಿ, ಹಿಮ್ಮೆಟ್ಟಿಸದಿರುತ್ತಾನೆಯೆ? ಆತಂಕಕ್ಕೆ ಸಿಕ್ಕಿಕೊಂಡರೂ ಸ್ನೇಹಭಾವಕ್ಕೆ ತಕ್ಕುದಾದ ಸರಿಸಮಾನ ವಯಸ್ಸು ರಕ್ಷಿಸುತ್ತದೆ. [೨೬]

118 ಭಟ—ಕುಮಾರನ ರಥವಾದರೊ—

119 ತಡೆಹಿಡಿದಾಗ ಅತ್ತಿತ್ತ ಚಲಿಸುತ್ತದೆ. ಸಡಲಿಸಿ ಬಿಟ್ಟಾಗ ಓಡುತ್ತದೆ. (ಅಭಿಮನ್ಯುವಿನ ರಥದ) ಹತ್ತಿರ ಸಾರಿದಾಗಲೂ ಅದರ ಮೇಲೆ ಹಾಯುವ

ದಿಲ್ಲ. ದೂರ ಹೋಗಲೂ ಇಚ್ಛಿಸುವುದಿಲ್ಲ. ಸಮೀಪ ಪ್ರದೇಶದಲ್ಲೇ ಚಪಲತೆಯಿಂದ ಸುತ್ತಾಡುತ್ತಾ ಅವನ ರಥವು (ಸಾರಥ್ಯದಲ್ಲಿ) ಯೋಗ್ಯವಾದ ಉಪದೇಶ ನೀಡುತ್ತಿದೆಯೋ ಎಂಬಂತಿದೆ. [೨೭]

120 ರಾಜ—ಹೋಗು; ಮುಂದಿನ ವೃತ್ತಾಂತ ತಿಳಿ.

121 ಭಟ—ಮಹಾರಾಜನ ಅಪ್ಪಣೆಯಂತೆ. (ಹೊರಕ್ಕೆ ಹೋಗಿ, ಪುನಃ ಬಂದು) ಮಹಾರಾಜನಿಗೆ ಜಯವಾಗಲಿ! ವಿರಾಟೇಶ್ವರನಿಗೆ ಜಯವಾಗಲಿ! ಮಹಾರಾಜನಿಗೆ ಪ್ರಿಯವಾದುದನ್ನು ನಿವೇದಿಸುತ್ತೇನೆ. ಗೋಗ್ರಹಣ(ಯತ್ನ) ಮುರಿಯಲ್ಪಟ್ಟಿತು. ಧಾರ್ತರಾಷ್ಟ್ರರು ಹಿಂದಕ್ಕೆ ಹೋಗಿಬಿಟ್ಟರು.

122 ಭಗವಾನ್—ನೀನು ವೃದ್ಧಿ ಹೊಂದುತ್ತಿರುವುದು ಸಂತೋಷ.

123 ರಾಜ—ಹಾಗಲ್ಲ. ಇದು ಭಗವಂತನಾದ ನಿನ್ನ ವೃದ್ಧಿ. ಆಮೇಲೆ, ಕುಮಾರ ಈಗ ಎಲ್ಲಿ?

124 ಭಟ—ಕುಮಾರನು, ತಾನು ಕಂಡಂತೆ, ಸಾಹಸ ತೋರಿಸಿದ ಯೋಧ ಪುರುಷರ ಕರ್ಮಗಳನ್ನು ಪುಸ್ತಕದಲ್ಲಿ ಬರೆಯಿಸುತ್ತಿದ್ದಾನೆ.

125 ರಾಜ—ಓಹೋ, ಈ ಕುಮಾರನು ಶ್ಲಾಘ್ಯವಾದ ಕೆಲಸವನ್ನೇ ಮಾಡುತ್ತಿದ್ದಾನೆ.

126 ಶ್ಲಾಘನೀಯವಾದ (ಪರಾಕ್ರಮದ) ಕೆಲಸಮಾಡಿ ಯುದ್ಧದಲ್ಲಿ ಪೆಟ್ಟುತಿಂದ ಯೋಧನಿಗೆ ಕಾಲವಿಳಂಬವಿಲ್ಲದೆ ಮಾಡುವ ಪೂಜೆ ಖಂಡಿತವಾಗಿಯೂ (ಅವನ) ವೇದನೆಯನ್ನು ಹೋಗಲಾಡಿಸುತ್ತದೆ. [೨೮]

127 ಆಮೇಲೆ, ಬೃಹನ್ನಳೆ ಈಗೆಲ್ಲಿ?

128 ಭಟ—ಪ್ರಿಯ (ವೃತ್ತಾಂತ)ವನ್ನು ತಿಳಿಸುವುದಕ್ಕಾಗಿ (ಅಂತಃಪುರದ) ಒಳಕ್ಕೆ ಹೋಗಿದ್ದಾಳೆ.

129 ರಾಜ—ಬೃಹನ್ನಳೆಯನ್ನೇ ಸ್ವಲ್ಪ ಕರೆ.

130 ಭಟ—ಮಹಾರಾಜ ಅಪ್ಪಣೆ ಮಾಡಿದಂತೆ. (ಹೋಗುತ್ತಾನೆ)

131 (ಬಳಿಕ ಬೃಹನ್ನಳೆ ಪ್ರವೇಶಿಸುತ್ತಾಳೆ)

132 ಬೃಹನ್ನಳೆ—(ತನ್ನ ಸ್ತ್ರೀರೂಪವನ್ನು ನೋಡಿಕೊಂಡು ವಿಮರ್ಶಿಸುತ್ತಾ)

133 ಗಾಂಡೀವದೊಡನೆ ಮುಹೂರ್ತಕಾಲ ಹೋರಾಡಿ (ಬಳಿಕ) ಹೆದೆಯೇರಿಸಿದ್ದಾಯಿತು. ನನ್ನ ಮುಷ್ಟಿಯೂ ಬಿಗಿಯಾಗಿಲ್ಲದೆ ಬಾಣಗಳನ್ನು

ಹಿಡಿತದಲ್ಲಿಡಲು ಅಸಮರ್ಥವಾಯಿತು. ಚರ್ಮದ(ಗೋಧಾ) ಪಟ್ಟಿ ತೊಟ್ಟ ಎಡತೋಳಿನಲ್ಲಿರಬೇಕಾದ ಪಾಟವವೂ ಇಲ್ಲದೆ ಹೋಯಿತು. (ಅದಕ್ಕೆ) ತಕ್ಕಂತೆ ನನ್ನ (ಬಲಗೈ) ಚಳಕವೂ ಕಳೆದುಹೋಗಿತ್ತು. ಆದರೂ, ಆಮೇಲೆ, ಸ್ತ್ರೀಭಾವದಿಂದ ಶಿಥಿಲಗೊಂಡಿದ್ದ ನನ್ನ ನೈಜಭಾವವು (ಹಿಂದಿನ) ಪರಿಚಯ ದಿಂದ ಮರಳಿಬಂತು. [೨೯]

134 ನನ್ನಿಂದಾದರೋ—

135 ನರೇಂದ್ರರ ಮಧ್ಯೆ ಲಜ್ಜಾಯಮಾನವಾದ ಈ ವೇಷದಿಂದಲೇ ಧನುಸ್ಸು ಎಳೆಯಲ್ಪಟ್ಟಿತು. ನನ್ನ (ರಣ)ಯಾತ್ರೆಯಾದರೂ ಬಾಣಗಳ ಸುರಿಮಳೆಯಲ್ಲೇ (ಸಾಗಿತ್ತು); (ರಕ್ತಪಾತದಿಂದ) ಕಲುಷಿತವಾದ ಧೂಳೂ ಬೇಗ ಅಡಗಿಹೋಯಿತು. [೩೦]

136 (ಆದರೂ)—ಓಃ!

137 ರಣತಂಗದ ಮುಂಬದಿಯಲ್ಲಿ ನಾನು ದುಃಶಾಸನನನ್ನು ಸೆರೆಹಿಡಿದು ಬಂಧಿಸಿ ತರದೆಯೇ ವಿರಾಟಪುರವನ್ನು ಪ್ರವೇಶಿಸಿರುವೆನಾದ್ದರಿಂದ, ಗೋವುಗಳನ್ನು (ಮರಳಿ) ಜಯಿಸಿಯೂ, ರಾಜರುಗಳ ಮೇಲೆ ವಿಜಯವನ್ನು ಹೊಂದಿಯೂ, ವಿಜಯಲಾಭದಿಂದಾಗಬೇಕಾದ ವಿಶೇಷವಾದ ಹರ್ಷ ನನ್ನ ಮನಸ್ಸಿಗೆ ಇಲ್ಲವೇ ಇಲ್ಲ! [೩೧]

138 ಉತ್ತರೆಯು ಪ್ರೀತಿಯಿಂದ ಕೊಟ್ಟ ಅಲಂಕಾರಗಳಿಂದ ಅಲಂಕೃತನಾಗಿ, ರಾಜ (ಯುಧಿಷ್ಠಿರ)ನನ್ನು ಕಾಣಲು ಏನೋ ಒಂದು ಬಗೆಯಾಗಿ ನಾಚುತ್ತಿದ್ದೇನೆ. ಆದ್ದರಿಂದ ವಿರಾಟೇಶ್ವರನನ್ನು ನೋಡುತ್ತೇನೆ. (ಮುಂದೆ ಹೋಗಿ, ನೋಡಿ) ಓ, ಇಲ್ಲೇ ಆರ್ಯ ಯುಧಿಷ್ಠಿರ(ನೂ)!

139 ಯೌವನದಿಂದ ಕೂಡಿದ್ದರೂ ಶ್ರೇಷ್ಠವಾದ ತಪೋವನದಲ್ಲಿ ಆಸಕ್ತ; ನರೇಶ್ವರನಾದರೂ ಬ್ರಾಹ್ಮಣವೃತ್ತಿಯನ್ನಾಶ್ರಯಿಸಿದವ; ರಾಜ್ಯವನ್ನು ತೊರೆದಿದ್ದರೂ ಯಶಸ್ಸಿನಿಂದ ಮೇಲಾಗಿರುವವ; ತ್ರಿದಂಡಧಾರಿಯಾಗಿದ್ದಾನೆಯೇ ವಿನಾ ರಾಜದಂಡವನ್ನು ಧರಿಸಿಲ್ಲ. [೩೨]

140 (ಹತ್ತಿರ ಹೋಗಿ) ಭಗವಂತನೆ, ಅಭಿವಾದನಮಾಡುತ್ತೇನೆ.

141 ಭಗವಾನ್—ಸ್ವಸ್ತಿ!

142 ಬೃಹನ್ನಳೆ— ಪ್ರಭುವಿಗೆ ಜಯವಾಗಲಿ.

143 ರಾಜ—ರೂಪವೂ ಕಾರಣವಲ್ಲ, ಕುಲವೂ ಕಾರಣವಲ್ಲ; ದೊಡ್ಡವರಾಗಿರಲಿ, ಅಲ್ಪರಾಗಿರಲಿ, ಶೋಭಿಸುವುದು (ಅವರವರ) ಕೃತಿಯೇ. ಇದೇ ರೂಪ ಮೊದಲು ಅಲ್ಲಗಳೆಯಲ್ಪಟ್ಟಿತ್ತು; ಅದೇ ಮರಳಿ (ಈಗ) ಬಹುಮಾನಕ್ಕೆ ಪಾತ್ರವಾಗಿದೆ. [೩೩]

144 ಬೃಹನ್ನಳೆ, (ಈಗಾಗಲೇ) ನೀನು ಬಳಲಿದ್ದರೂ ತಿರುಗಿ ನಿನ್ನನ್ನು ಆಯಾಸಪಡಿಸುತ್ತೇನೆ. ಯುದ್ಧದ ವಿವರ ವಿಸ್ತಾರವನ್ನು ತಿಳಿಸು.

145 ಬೃಹನ್ನಳೆ—ಪ್ರಭು ಆಲಿಸಬಹುದು.

146 ರಾಜ—ಅದ್ಭುತವಾದ ವೀರಕರ್ಮ(ಅದು). (ಪ್ರಾಕೃತವನ್ನು ಬಿಟ್ಟು) ಸಂಸ್ಕೃತದಲ್ಲೇ ಹೇಳು.

147 ಬೃಹನ್ನಳೆ—ಮಹಾರಾಜನು ಆಲಿಸಬೇಕು—

148 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ!

149 ರಾಜ—ಅಪೂರ್ವವಾದುದೋ ಎಂಬಂತಿದೆ ನಿನ್ನ ಹರ್ಷ; ಹೇಳು, ಯಾವುದರಿಂದ ನೀನು (ಇಷ್ಟು) ವಿಸ್ಮಿತನಾಗಿದ್ದೀ?

150 ಭಟ—ನಂಬಲಾಗದ ಪ್ರಿಯ ಲಭಿಸಿದೆ. ಸೌಭದ್ರ ಹಿಡಿಯಲ್ಪಟ್ಟಿದ್ದಾನೆ! [೩೪]

151 ಬೃಹನ್ನಳೆ—ಏನು? ಹಿಡಿಯಲ್ಪಟ್ಟನೆ?

(ಆತ್ಮಗತ, 152 ಈ ಸೈನ್ಯದ ಬಲ ಈದಿನ ನನ್ನಿಂದ ತೂಕಮಾಡಲ್ಪಟ್ಟಿದೆ ರಣರಂಗದಲ್ಲಿ, ಈಗತಾನೆ, ಅವನು ಗಣನೀಯ(ನಾದ ವೀರ)ನೆಂಬುದು ನನಗೆ ಪ್ರತ್ಯಕ್ಷ ಗೋಚರವಾಗಿದೆ. ಈಕಡೆ ಅವನಿಗೆ ಸಮನಾದವನು ಯಾವನೂ ಇಲ್ಲ; ಕೀಚಕರು ನಿಹತರಾಗಿರುವಾಗ (ಇಂತಹ ಸಮರ್ಥರು ಬೇರೆ) ಯಾರಿದ್ದಾರು? [೩೫]

153 ಭಗವಾನ್—ಬೃಹನ್ನಳೆ, ಏನಿದು?

154 ಬೃಹನ್ನಳೆ—ಭಗವನ್!

155 ಅವನನ್ನು ಜಯಿಸತಕ್ಕವನನ್ನು ನಾನರಿಯೆ; ಅವನಾದರೂ ಬಲಶಾಲಿ, ಶಿಕ್ಷಿತ; ಅವನ ಪಿತೃಗಳ ಭಾಗ್ಯದೋಷದಿಂದೇನಾದರೂ ಅಪಮಾನಿತನಾಗಿರಬಹುದು. [೩೬]

156 ರಾಜ—ಈಗ (ಅವನು) ಹಿಡಿಯಲ್ಪಟ್ಟಿದ್ದಾದರೂ ಹೇಗೆ?

157 ಭಟ— ನಿರ್ಭಯನಾಗಿ ರಥದ ಹತ್ತಿರ ಹೋಗಿ, ತೋಳುಗಳಿಂದ ಇಳಿಸಲ್ಪಟ್ಟ.

158 ರಾಜ—ಯಾರಿಂದ?

159 ಭಟ—ಅದೇ ನರೇಂದ್ರನಿಂದ ಅಡುಗೆಮನೆಯಲ್ಲಿ ನಿಯುಕ್ತನಾಗಿದ್ದಾನಲ್ಲ, ಅವನಿಂದ. [೩೭]

160 ಬೃಹನ್ನಳೆ—(ಏಕಾಂತವಾಗಿ) ಹೀಗೆ ಆರ್ಯ ಭೀಮನಿಂದ ಆಲಿಂಗಿತನಾದ, ಹಿಡಿಯಲ್ಪಡಲಿಲ್ಲ!

161 ನಾವು ದೂರದಲ್ಲೇ ಇದ್ದು ಸುಮ್ಮನೆ ನೋಡಿದ ಮಾತ್ರದಿಂದಲೇ ಸಂತೋಷಗೊಂಡೆವು. ಬಹಿರಂಗವಾಗಿಯೇ (ಎಲ್ಲವನ್ನೂ) ಮಾಡುವ ಆ ಭೀಮನಿಂಧ ಪುತ್ರಸ್ನೇಹವು ಸಾಕ್ಷಾತ್ತಾಗಿಯೇ ಅನುಭವಿಸಲ್ಪಟ್ಟಿತು. [೩೮]

162 ರಾಜ—ಹಾಗಾದರೆ ಅಭಿಮನ್ಯುವನ್ನು ಸತ್ಕಾರಗಳೊಡನೆ ಬರಮಾಡಿ.

163 ಭಗವಾನ್— ರಾಜನೇ, ವೃಷ್ಣಿ ಮತ್ತು ಪಾಂಡವರು ನಾಥರಾಗಿರುವ ಅಭಿಮನ್ಯುವಿನ ಸತ್ಕಾರವನ್ನು ಭಯದಿಂದ (ಆದುದು) ಎಂದು ಜನ ತಿಳಿಯುತ್ತಾರೆ. ಆದ್ದರಿಂದ ಅವನನ್ನು ತಿರಸ್ಕರಿಸುವುದೇ ನ್ಯಾಯ.

164 ರಾಜ—ಯಾದವೀಪುತ್ರ ತಿರಸ್ಕಾರಕ್ಕೆ ಯೋಗ್ಯನಲ್ಲ. ಯಾಕೆಂದರೆ—

165 ಅವನು ಯುಧಿಷ್ಠಿರನ ಮಗ; ನಮ್ಮ ಮಗನಿಗೆ ಸಮವಯಸ್ಕ; ದ್ರುಪದನೊಡನೆ ನಮಗೆ ಪರಂಪರಾಗತ ಸಂಬಂಧವಿದೆ; ಆದ್ದರಿಂದ ಅವನು ನನಗೆ ಮೊಮ್ಮಗನಾಗಬೇಕು. ಅಳಿಯನಾಗುವಿಕೆಯೂ ಬಹಳ ದೂರದಲ್ಲಿರಲಾರದು. ಏಕೆಂದರೆ ನನ್ನದು ಕನ್ಯಾಪಿತೃತ್ವ. ಅತಿಥಿಯಾಗಿರುವುದರಿಂದ ಪೂಜಾರ್ಹನೇ ಅಹುದು; ಪಾಂಡವರಂತು, ಅವರ ವಿಭವ ಎಂತಹುದೇ ಇದ್ದರೂ, ನಮಗೆ ಇಷ್ಟರೇ. [೩೯]

166 ಭಗವಾನ್—ನಿಜ. ಆದರೂ ಹೇಳುವುದನ್ನು ಹೇಳಲೂ ಬೇಕು; ಪರಿಹರಿಸಬೇಕಾದುದನ್ನು ಪರಿಹರಿಸಲೂ ಬೇಕು.

167 ರಾಜ—ಈಗ, ಯಾರಿಂದ ಅವನು ಕರೆತರಲ್ಪಡಬೇಕು?

168 ಭಗವಾನ್—ಬೃಹನ್ನಳೆಯಿಂದ.

169 ರಾಜ – ಬೃಹನ್ನಳೆ, ಅಭಿಮನ್ಯುವನ್ನು ಕರೆದುಕೊಂಡುಬಾ.

170 ಬೃಹನ್ನಳೆ—ಮಹಾರಾಜನ ಅಪ್ಪಣೆಯಂತೆ. (ಆತ್ಮಗತ) ಬಹಳ ಹೊತ್ತಿನಿಂದ ಕೋರಿದ್ದ ನಿಯೋಗ ಈಗ ದೊರಕಿತು. (ಹೋಗುತ್ತಾಳೆ)

171 ಭಗವಾನ್-(ಆತ್ಮಗತ) 172 ಇನ್ನು ಈಗ ಕಣ್ತುಂಬುವಷ್ಟು ನೋಡಲಿ. ಅಥವಾ ಏಕಾಂತದಲ್ಲಿ (ಮಗನನ್ನು) ಕಂಡು ಗಾಢವಾಗಿ ಆಲಿಂಗಿಸಿಕೊಳ್ಳಲಿ. ಅಥವಾ ಯಥೇಚ್ಛವಾಗಿ ಆನಂದಬಾಷ್ಪವನ್ನು ತಳೆಯಲಿ. ಯಾಕೆಂದರೆ, ನನ್ನೆದುರಿಗೆ (ತನ್ನ) ಪುತ್ರ(ಸ್ನೇಹ)ವನ್ನು (ತೋರಲು) ಈತ ನಾಚುತ್ತಾನೆ. [೪೦]

173 ರಾಜ—ಕುಮಾರನ (ಪರಾಕ್ರಮ) ಕಾರ್ಯವನ್ನು ನೋಡು.

174 ಭೀಷ್ಮನೇ ಮೊದಲಾಗಿ ರಾಜರುಗಳು ಸೋಲಿಸಲ್ಪಟ್ಟರು. ಅಭಿಮನ್ಯು ಕೈಸೆರೆ ಸಿಕ್ಕಿದ. ಸಂಕ್ಷೇಪವಾಗಿ ಹೇಳುವುದಾದರೆ, ಅರ್ಥಾತ್ ಪೃಥ್ವಿಯೇ ಇಂದು ಉತ್ತರ(ಕುಮಾರ)ನಿಂದ ಜಯಿಸಲ್ಪಟ್ಟಿದೆ. [೪೧]

175 (ಬಳಿಕ ಭೀಮಸೇನ ಪ್ರವೇಶಿಸುತ್ತಾನೆ)

176 ಭೀಮಸೇನ—ಅರಗಿನ ಮನೆ ಬೆಂಕಿ ಹೊತ್ತಿಸಲ್ಪಡಲು ನನ್ನ ಭುಜಗಳಿಗೆ ತೆಕ್ಕೆಬಿದ್ದಿದ್ದ ನನ್ನ ಸೋದರರೂ ತಾಯಿಯೂ ನನ್ನಿಂದ ಹೊರತರಲ್ಪಟ್ಟರು. ಬಾಲಕನಾದ ಅಭಿಮನ್ಯುವನ್ನು (ಈಗ) ರಥದಿಂದ ಇಳಿಸಿದ ಮೇಲೆ, ಮೊದಲಿನ ಆ ಶ್ರಮವೂ ಈಗಿನದೂ ಸಮ ಎಂದೇ ಭಾವಿಸುತ್ತೇನೆ. [೪೨]

177 ಕುಮಾರ, ಇತ್ತ, ಇತ್ತ ಬಾ.

178 (ಬಳಿಕ ಅಭಿಮನ್ಯುವೂ ಬೃಹನ್ನಳೆಯೂ ಪ್ರವೇಶಿಸುತ್ತಾರೆ)

179 ಅಭಿಮನ್ಯು...ಎಲಾ, ಈತ ಯಾರು?

180 ವಿಶಾಲವಾದ ಎದೆ, ತೆಳ್ಳಗಿರುವಿಕೆಯನ್ನು ಗಳಿಸಿಕೊಂಡಿರುವ ಉದರ, ಸ್ಥಿರವೂ ಉನ್ನತವೂ ಆದ ಭುಜಗಳು, ಮಾಂಸಲವಾದ ತೊಡೆಗಳು, ಕೃಶವಾದ ಸೊಂಟ—ಇವುಗಳುಳ್ಳವನು! ಬಲದಲ್ಲಿ (ನನಗಿಂತ) ಅಧಿಕನೇ ಆಗಿದ್ದರೂ ಯಾವನ ಒಂದೇ ತೋಳಿನಿಂದ ನಾನು ನಿಯಂತ್ರಿತನಾಗಿ ಇಲ್ಲಿಗೆ ತರಲ್ಪಟ್ಟಿದ್ದರೂ (ಯಾವ ರೀತಿಯಲ್ಲೂ) ಪೀಡಿತನಾಗಲಿಲ್ಲವೋ, ಆ ಈತ ಯಾರು? [೪೩]

181 ಬೃಹನ್ನಳೆ—ಇತ್ತ, ಕುಮಾರ, ಇತ್ತ ಬಾ.

182 ಅಭಿಮನ್ಯು—ಎಲಾ, ಈ ಇನ್ನೊಬ್ಬನಾರು?

183 ಹೆಣ್ಣಾನೆಯ ಅಲಂಕಾರ ತೊಡಿಸಿರುವ ಗಂಡಾನೆಯಂತೆ ತನ ಗೊಪ್ಪದ ಹೆಂಗಸರ ಒಡವೆಗಳಿಂದ ಅಲಂಕೃತನಾಗಿ, ವೇಷದಿಂದ ಲಘುವಾಗಿಯೂ, ಓಜಸ್ಸಿನಿಂದ ಮಹಾಪರಾಕ್ರಮಿಯಾಗಿಯೂ, ಉಮಾವೇಷವನ್ನು ತೊಟ್ಟ ಹರನಂತೆ ಕಾಣಿಸುತ್ತಿದ್ದಾನೆ. [೪೪]

184 ಬೃಹನ್ನಳೆ—(ಏಕಾಂತವಾಗಿ) ಇವನನ್ನಿಲ್ಲಿಗೆ ತಂದು ಆರ್ಯನು ಮಾಡಿರುವುದಾದರೂ ಏನು?

185 ಮೊದಲನೆಯ ಯುದ್ಧದಲ್ಲೆ ಪರಾಜಿತನಾದನೆಂಬ ಅಪಕೀರ್ತಿ ಬಂತು; ಪ್ರಿಯಪುತ್ರನಿಂದ ವಿರಹಿತಳಾಗಿ ಸುಭದ್ರೆ ಶೋಚನೀಯಳಾದಳು. ಸೋತುಬಿಟ್ಟನೆಂದು ವಾಸುದೇವನೂ ಇವನ ಮೇಲೆ ಆಗ್ರಹಗೊಳ್ಳುತ್ತಾನೆ. ಹೆಚ್ಚೇಕೆ? ನಿನ್ನ ತೋಳ್ಬಲ ದೂಷಿತವಾಯಿತು. [೪೫]

186 ಭೀಮಸೇನ—ಅರ್ಜುನ!

187 ಬೃಹನ್ನಳೆ—ಹೌದು, ಹೌದು; ಅರ್ಜುನನ ಮಗ ಈತ.

188 ಭೀಮಸೇನ—(ಏಕಾಂತವಾಗಿ) ಈತನ ನಿಗ್ರಹದಿಂದಾಗಿರುವ ಈ ದೋಷಗಳನ್ನೆಲ್ಲಾ ಬಲ್ಲೆ. ಶತ್ರುವಿನ ಕೈಯಲ್ಲಿ ಮಗನಿರುವುದನ್ನು ಯಾವನು ತಾನೇ ಸಹಿಸಿಯಾನು? ಇಷ್ಟಾಪತ್ತಿಯಾಗಿದ್ದುದರಿಂದಲೂ, ಅದೂ ಅಲ್ಲದೆ, ದುಃಖಮಗ್ನಳಾದ ದ್ರೌಪದಿ ಇವನನ್ನು ನೋಡಲಿ ಎಂದೂ ಇವನು ಇಲ್ಲಿಗೆ ತರಲ್ಪಟ್ಟ. [೪೬]

189 ಬೃಹನ್ನಳೆ—(ಏಕಾಂತವಾಗಿ) ಆರ್ಯ, ನನಗೆ ಆವನೊಡನೆ ಮಾತಾಡುವ ಕುತೂಹಲ ಹೆಚ್ಚಾಗಿದೆ. ಅವನು ಮಾತಾಡುವಂತೆ ಮಾಡು.

190 ಭೀಮಸೇನ—ಆಗಲಿ. ಅಭಿಮನ್ಯು!

191 ಅಭಿಮನ್ಯು—ಅಭಿಮನ್ಯುವಂತೆ!

192 ಭೀಮಸೇನ—ನನ್ನ ಮೇಲೆ ರೇಗುತ್ತಾನೆ. ನೀನೇ ಅವನನ್ನು ಮಾತಾಡಿಸು.

193 ಬೃಹನ್ನಳೆ—ಅಭಿಮನ್ಯು!

194 ಅಭಿಮನ್ಯು-ಏನು, ಏನು? ನಾನು ಬರೀ ಅಭಿಮನ್ಯುವೋ? ಎಲೌ,

195 ಕ್ಷತ್ರಿಯವಂಶಜರು ನೀಚರಿಂದಲೂ ಹೆಸರುಹಿಡಿದೇ ಮಾತಾಡಿಸಲ್ಪಡುತ್ತಾರಲ್ಲ, ಇದೇನು ಇಲ್ಲಿಯ ನಡವಳಿಕೆಯೋ, (ಅಥವಾ) ಸೆರೆಸಿಕ್ಕಿರುವುದರಿಂದ ಅಪಮಾನಮಾಡಲಾಗುತ್ತಿದೆಯೋ? [೪೭]

196 ಬೃಹನ್ನಳೆ—ಅಭಿಮನ್ಯು, ನಿನ್ನ ತಾಯಿ ಸುಖವಾಗಿದ್ದಾಳೆಯೆ?

197 ಅಭಿಮನ್ಯು—ಏನು, ಏನು? ತಾಯಿಯಂತೆ!

198 ನನ್ನ ಮೇಲೆ ತಂದೆಯಂತೆ ಅಧಿಕಾರಮಾಡುತ್ತಾ ಹೆಂಗಸರ ವಿಚಾರ

ನನ್ನು ಕೇಳುತ್ತೀಯಲ್ಲಾ, ನೀನೇನು ಧರ್ಮರಾಜನೇ, ಭೀಮಸೇನನೇ, ಅಥವಾ ಧನಂಜಯನೇ ! [೪೮]

199 ಬೃಹನ್ನಳೆ—ಅಭಿಮನ್ಯು, ದೇವಕೀಪುತ್ರ ಕೇಶವ ಕುಶಲದಿಂದಿದ್ದಾನೆಯೆ ?

200 ಅಭಿಮನ್ಯು—ಏನು ? ಪೂಜ್ಯ(ನಾದ ಕೃಷ್ಣ)ನನ್ನೂ ಹೆಸರು ಹಿಡಿದು ? ಸರಿ, ಸರಿ. ನಿನ್ನ ಬಗ್ಗೆ ಆತಂಕಗೊಂಡಿರುವ ಆವನು ಕುಶಲಿ.

201 (ಇಬ್ಬರೂ ಪರಸ್ಪರ ನೋಡುತ್ತಾರೆ)

202 ಅಭಿಮನ್ಯು—ಇದೇನು ? ಈಗ ತಿರಸ್ಕಾರದಿಂದಲೋ ಎಂಬಂತೆ ನನ್ನನ್ನು ನೋಡಿ ನಗುತ್ತಿದ್ದೀ ?

203 ಬೃಹನ್ನಳೆ—ಏನೂ ಇಲ್ಲ.

204 ಪಾರ್ಥನನ್ನು ತಂದೆಯನ್ನಾಗಿಯೂ ಜನಾರ್ದನನನ್ನು ಸೋದರಮಾವನನ್ನಾಗಿಯೂ ಪಡೆದು, ತರುಣನೂ ಅಸ್ತ್ರಪ್ರಯೋಗದಲ್ಲಿ ನುರಿತವನೂ ಆದ ನಿನಗೆ ಯುದ್ಧದಲ್ಲಿ ಸೋಲು ಯುಕ್ತವಾದದ್ದೆ ? [೪೯]

205 ಅಭಿಮನ್ಯು—ಸಾಕು.. ನಮ್ಮ ವಂಶದಲ್ಲಿ ಆತ್ಮಸ್ತುತಿ ಮಾಡಿಕೊಳ್ಳುವುದು ಯೋಗ್ಯವಲ್ಲ. (ಯುದ್ಧದಲ್ಲಿ) ಹತರಾದವರಲ್ಲಿ (ನಾಟಿಕೊಂಡಿರುವ) ಬಾಣಗಳನ್ನು ನೋಡು. (ನನ್ನದಲ್ಲದೆ) ಬೇರೆ ಹೆಸರಿರುವುದಿಲ್ಲ. [೫೦]

206 ಬೃಹನ್ನಳೆ—(ಆತ್ಮಗತ) ಕುಮಾರ ನಿಜವನ್ನೇ ಹೇಳಿದ್ದಾನೆ.

207 ರಥ, ಕುದುರೆ, ಮದದಾನೆ ಇವುಗಳಿಂದ ಕೂಡಿದ ಆ ಯೋಧರ ಸೈನ್ಯದಲ್ಲಿ ಬಾಣ (ಪ್ರಯೋಗದಲ್ಲಿ) ನಿಪುಣನಾದ (ಈತನಿಂದ) ಹೊಡೆಯಲ್ಪಡದವನೊಬ್ಬನೂ ಇಲ್ಲ. ನನ್ನಿಂದ ರಥವು ಬೇರೆ ಕಡೆಗೆ ತಿರುಗಿಸಲ್ಪಡದೆ ಹೋಗಿದ್ದರೆ ನಾನೂ ಕೂಡ ಹೊಡೆಯಲ್ಪಡುತ್ತಿದ್ದೆ. [೫೧]

208 (ಪ್ರಕಾಶ) ಇದು ಜಂಭದ ಮಾತು. ಏತಕ್ಕಾಗಿ ಆ ಕಾಲಾಳಿನಿಂದ ಸೆರೆ ಹಿಡಿಯಲ್ಪಟ್ಟೆ ?

209 ಅಭಿಮನ್ಯು—ನಿರಾಯುಧನಾಗಿ ನನ್ನೆಡೆಗೆ ಬಂದ. ಆದ್ದರಿಂದ ಸೆರೆಸಿಕ್ಕಿದೆ. ತಂದೆ ಅರ್ಜುನ ಎಂಬುದನ್ನು ಸ್ಮರಿಸಿಯೂ ಯಾವನು ತಾನೇ ಶಸ್ತ್ರ ಕೆಳಗಿಟ್ಟವನನ್ನು ಕೊಂದಾನು ? [೫೨]

210 ಭೀಮಸೇನ—(ಆತ್ಮಗತ) ಮಗನ ಮತ್ತು ತಂದೆಯಾದ ತನ್ನ ಯುದ್ಧ

ಪರಾಕ್ರಮ,—ಶ್ಲಾಘಿಸಲು ಯೋಗ್ಯವಾದ (ಈ) ಎರಡನ್ನೂ ಪ್ರತ್ಯಕ್ಷವಾಗಿ ಕಿವಿಯಾರ ಕೇಳಿದ ಅರ್ಜುನನೇ ಧನ್ಯ! [೫೩]

211 ರಾಜ—ಅಭಿಮನ್ಯುವನ್ನು ತ್ವರೆಗೊಳಿಸು, ತ್ವರೆಗೊಳಿಸು.

212 ಬೃಹನ್ನಳೆ—ಇತ್ತ, ಕುಮಾರನೇ ಇತ್ತ. ಇದೋ, ಮಹಾರಾಜ. ಕುಮಾರ, ಹತ್ತಿರ ಹೋಗು.

213 ಅಭಿಮನ್ಯು—ಆಃ! ಯಾರ ಮಹಾರಾಜ?

214 ಬೃಹನ್ನಳೆ—ಬೇಡ, (ಹಾಗೆ ಹೇಳ)ಬೇಡ. ಬ್ರಾಹ್ಮಣನ ಜತೆಯಲ್ಲಿ ಕುಳಿತಿದ್ದಾನೆ.

215 ಅಭಿಮನ್ಯು—'ಬ್ರಾಹ್ಮಣನ ಜತೆಯಲ್ಲಿ' ಎಂದೆಯಾ? (ಹತ್ತಿರ ಹೋಗಿ) ಭಗವನ್, ಅಭಿವಾದನ ಮಾಡುತ್ತೇನೆ.

216 ಭಗವಾನ್—ಬಾ, ಬಾ ವತ್ಸ!

217 ತಂದೆ (ಅರ್ಜುನ) ಒಬ್ಬನಲ್ಲೇ ಇರುವ ದಕ್ಷತೆ, ದಿಟ್ಟತನದಿಂದ ಕೂಡಿದ ವಿನಯ, ಸ್ವಪಕ್ಷದಲ್ಲಿ ದಯೆ, ಮಾಧುರ್ಯ, ಧನುಸ್ಸಿನ (ಉಪಯೋಗದ)ಲ್ಲಿ ಜಯ ಮತ್ತು ಪರಾಕ್ರಮ,—ಈ ಎಲ್ಲ ಗುಣಗಳನ್ನೂ, ಉಳಿದ ನಾಲ್ಕು ಜನ (ಪಿತೃವ್ಯ)ರಲ್ಲಿರುವ ಗುಣಗಳಲ್ಲಿ ನಿನಗೆ ಹಿಡಿಸತಕ್ಕ ಇತರ ಗುಣಗಳನ್ನೂ ಪಡೆ. [೫೪]

218 ಅಭಿಮನ್ಯು—ಅನುಗೃಹೀತನಾದೆ.

219 ರಾಜ—ಬಾ, ಬಾ ಪುತ್ರ. ಏನಿದು? ನನ್ನನ್ನು (ನೀನು) ನಮಸ್ಕರಿಸುತ್ತಿಲ್ಲ. ಆಹಾ! ಈ ಕ್ಷತ್ರಿಯ ಕುಮಾರ ಗರ್ವಿತನಾಗಿದ್ದಾನೆ. ನಾನಿವನ ದರ್ಪವನ್ನು ಇಳಿಸುತ್ತೇನೆ. ಇವನು ಯಾರಿಂದ ಸೆರೆ ಹಿಡಿಯಲ್ಪಟ್ಟ?

220 ಭೀಮಸೇನ—ಮಹಾರಾಜ, ನನ್ನಿಂದ.

221 ಅಭಿಮನ್ಯು—'ನಿರಾಯುಧನಾದ (ನನ್ನಿಂದ)' ಎಂದು ಹೇಳು.

222 ಭೀಮಸೇನ—ಶಾಂತಂ ಪಾಪಂ. (ಬಿಡ್ತು, ಬಿಡ್ತು)

223 ಹುಟ್ಟಿನಿಂದಲೇ ಬಂದ, ಈ ಪುಷ್ಟವಾದ ಹೆಗಲಿನಿಂದ ಕಟ್ಟುಮಸ್ತಾದ (ಈ) ಎರಡು ಭುಜಗಳೇ ನನ್ನ ಆಯುಧ. ಅವುಗಳನ್ನು ಉಪಯೋಗಿಸಿ (ನಾ) ಯುದ್ಧ ಮಾಡುತ್ತೇನೆ. ದುರ್ಬಲರಿಂದ ಬಿಲ್ಲು ಹಿಡಿಯಲ್ಪಡುತ್ತದೆ. [೫೫]

224 ಅಭಿಮನ್ಯು—ಎಲೌ, ಹಾಗನ್ನಬೇಡ.

225 ಯಾವನ ಬಾಹುವೇ ಅಕ್ಷೌಹಿಣೀ ಸೈನ್ಯಕ್ಕೆ ಸಮವೋ, ಯಾವನ ಪರಾಕ್ರಮವು ಸರಳವಾದುದೋ, ಆ (ನನ್ನ) ಮಧ್ಯಮ ಪಿತನೇ ನೀನು? ಈ ಮಾತು ಅವನಿಗೇ ತಕ್ಕದ್ದು. [೫೬]

226 ಭಗವಾನ್—ಪುತ್ರ, ಈ 'ಮಧ್ಯಮ' ಎಂಬುವವನು ಯಾರು?

227 ಅಭಿಮನ್ಯು—ಕೇಳೋಣಾಗಲಿ. ಆದರೆ ಬ್ರಾಹ್ಮಣರಿಗೆ ಪ್ರತಿಯಾಗಿ ಮಾತಾಡುವವನಲ್ಲ ನಾನು. ಬೇರೊಬ್ಬರು ಕೇಳಿದರೆ ವಾಸಿ.

228 ರಾಜ—ಆಗಲಿ, ಆಗಲಿ. ವತ್ಸ, ನನ್ನ ಮಾತಿನ ಮೇಲೆ ಹೇಳು. ಈ 'ಮಧ್ಯಮ' ಎಂಬುವವನಾರು?

229 ಅಭಿಮನ್ಯು—ಕೇಳೋಣಾಗಲಿ. ಯಾವನೆಂದರೆ—

230 ಕುತ್ತಿಗೆಗೆ ಇಕ್ಕಿದ ಕೈಯಿಂದ(ಲೇ) ಜರಾಸಂಧನನ್ನು ಮೇಲಕ್ಕೆತ್ತಿ ಆ ಅಸಹ್ಯಕರ್ಮವನ್ನು ಮಾಡಿ, ಕೃಷ್ಣನು ಮುಂದೆ ಅಂತಹುದನ್ನೆಸಗಲು ಅವಕಾಶವೇ ಇಲ್ಲದ ಸ್ಥಿತಿಯನ್ನು ತಂದವನು. [೫೭]

231 ರಾಜ—ನಿನ್ನ ಅಧಿಕ್ಷೇಪದಿಂದ ನನಗೆ ಕೋಪವಿಲ್ಲ; ನೀನು ಕೋಪಗೊಳ್ಳುವುದರಿಂದ ನನಗೆ ವಿನೋದವಾಗಿದೆ. ನಾನು ಏನು ಹೇಳಿದರೆ ಅಪರಾಧವಾಗದು? ನೀ ನಿಲ್ಲಿರುವಾಗ 'ಹೋಗು' ಎಂದು ಹೇಳುವುದಾದರೂ ಹೇಗೆ? [೫೮]

232 ಅಭಿಮನ್ಯು—ನಾನು ಅನುಗ್ರಹಿಸಲ್ಪಡಬೇಕಾದರೆ,

233 ಬಂಧನಕ್ಕೆ ತಕ್ಕುದಾದ ಕಾಲುಗಳಿಗೆ (ಬೇಡಿತೊಡಿಸುವ) ನಡವಳಿಕೆ ನಡೆಯಲಿ. ಬಾಹುಗಳಿಂದ ತರಲ್ಪಟ್ಟ ನನ್ನನ್ನು ಭೀಮನು ಬಾಹುಗಳಿಂದಲೇ (ಬಿಡಿಸಿ) ಕರೆದುಕೊಂಡು ಹೋಗುವನು. [೫೯]

234 (ಬಳಿಕ ಉತ್ತರನು ಪ್ರವೇಶಿಸುತ್ತಾನೆ)

235 ಉತ್ತರ—(ನನ್ನ ಪರಾಕ್ರಮದ ವಿಚಾರದಲ್ಲಿ) ಸುಳ್ಳು ಸುಳ್ಳಾದ ಮಾತುಗಳಲ್ಲಿ ನಂಬಿಕೆಯಿಟ್ಟವರಿಂದ ಸುಳ್ಳು ಪ್ರಶಂಸೆ (ಮಾಡಿಸಿಕೊಳ್ಳುವುದು) ಬಲು ಕಷ್ಟ. ನಾನಾದರೋ ಯುದ್ಧಭೂಮಿಯಿಂದ ಬಿಡುಗಡೆ ಹೊಂದಿದವನಾಗಿ, ಮಾತಿನಲ್ಲಿ ಸಮ್ಮತಿಸುತ್ತಿದ್ದರೂ, ಹೃದಯದ ಒಳಗೊಳಗೇ ನಾಚುತ್ತಿದ್ದೇನೆ. [೬೦]

236 (ಹತ್ತಿರ ಹೋಗಿ) ಭಗವನ್! ಅಭಿವಾದನ ಮಾಡುತ್ತೇನೆ.

237 ಭಗವಾನ್—ಸ್ವಸ್ತಿ.

238 ಉತ್ತರ—ತಂದೆಯೇ, ಅಭಿವಾದನ ಮಾಡುತ್ತೇನೆ.

239 ರಾಜ—ಬಾ ಬಾ ಮಗು! ಆಯುಷ್ಮಂತನಾಗು. ವತ್ಸ! (ವೀರೋಚಿತ) ಕೃತಿ ಯೆಸಗಿದ ವೀರಯೋಧರೆಲ್ಲ ಪೂಜಿಸಲ್ಪಟ್ಟರೆ?

240 ಉತ್ತರ—ಪೂಜಿಸಲ್ಪಟ್ಟರೆ? ಪೂಜ್ಯತಮನ ಪೂಜೆ (ಮೊದಲು) ಆಗಲಿ.

241 ರಾಜ—ಪುತ್ರ, ಯಾರಿಗೆ?

242 ಉತ್ತರ—ಇಲ್ಲಿರುವ ಈ ಶ್ಲಾಘ್ಯನಾದ ಧನಂಜಯನಿಗೆ.

243 ರಾಜ—ಹೇಗೆ? 'ಧನಂಜಯನಿಗೆ' ಎಂದೆಯಾ?

244 ಉತ್ತರ—ಅಹುದು. ಈ ಶ್ಲಾಘ್ಯನಿಂದ,

245 ಶ್ಮಶಾನದಿಂದ ಧನುಸ್ಸೂ ಅಕ್ಷಯಬಾಣಗಳುಳ್ಳ ಬತ್ತಳಿಕೆಯೂ ತರಲ್ಪಟ್ಟು, ಭೀಷ್ಮಾದಿನೃಪರು ಹಿಮ್ಮೆಟ್ಟಿಸಲ್ಪಟ್ಟರು; ನಾನು ರಕ್ಷಿಸಲ್ಪಟ್ಟೆ. [೬೧]

246 ಬೃಹನ್ನಳೆ—ಮಹಾರಾಜನು ಪ್ರಸನ್ನನಾಗಲಿ!

247 ಬಾಲ್ಯದ ಕಾರಣದಿಂದ ಈತ ಸಂಭ್ರಾಂತನಾಗಿದ್ದಾನೆ. ತಾನೇ ಪ್ರಹಾರ ಮಾಡುತ್ತಿದ್ದರೂ ಆತನಿಗೆ ಗೊತ್ತಾಗಿಲ್ಲ. ಎಲ್ಲ ಕೆಲಸವನ್ನೂ ತಾನೇ ಮಾಡಿ, ಇನ್ನೊಬ್ಬನಿಂದಾದುದೆಂದು ಭಾವಿಸುತ್ತಿದ್ದಾನೆ. [೬೨]

248 ಉತ್ತರ—ಶಂಕೆಯನ್ನು ತೊರೆ. ಇದೊ ತಿಳಿಸಿಬಿಡುತ್ತೇನೆ.

249 ಮುಂಗೈ ಮಧ್ಯೆ ಮರೆಯಾಗಿರುವ, ಗಾಂಡೀವದ ಹೆದೆಯಿಂದುಂಟಾಗಿದ್ದ ಆ ಗಾಯದ ಗುರುತು, ಹನ್ನೆರಡು ವರ್ಷಗಳ ಬಳಿಕವೂ ಇನ್ನೂ, ಸಹಜವಾದ ಬಣ್ಣಕ್ಕೆ ಬಂದಿಲ್ಲ. [೬೩]

250 ಬೃಹನ್ನಳೆ— ಈ ಗಾಯದ ಕಲೆ ನನ್ನ ಬಳೆಗಳನ್ನು ಮೇಲಕ್ಕೆಳೆದುಕೊಂಡಿದ್ದರಿಂದ ಆದದ್ದು. ಅದು (ಬಟ್ಟೆಯಿಂದ) ಮರೆಯಾಗಿಯೇ ಇರುವುದರಿಂದ ವಿವರ್ಣವಾಗಿದೆ. ಆದು ಗೋಧಾ (ಪಟ್ಟಿಯು) ಜಾಗದಲ್ಲೇ ಆಗಿಬಿಟ್ಟಿದೆ. [೬೪]

251 ರಾಜ—ಎಲ್ಲಿ ನೋಡೋಣ.

252 ಬೃಹನ್ನಳೆ—ನಾನು ರುದ್ರನ ಬಾಣಗಳಿಂದ ಆಹತವಾದ ಅವಯವಗಳುಳ್ಳ ಭರತವಂಶದ ಅರ್ಜುನನೇ ಆದರೆ, ಈತ ಭೀಮಸೇನ, ಈತ ಯುಧಿಷ್ಠಿರನೆಂಬುದು ವ್ಯಕ್ತವಾಗಲಿಲ್ಲವೆ? [೬೫]

253 ರಾಜ—ಓ ಧರ್ಮರಾಜ, ವೃಕೋದರ, ಧನಂಜಯ! ಇದೇನು, ನನ್ನನ್ನು ನಂಬುವುದಿಲ್ಲವೆ? ಆಗಲಿ. ಸಕಾಲದಲ್ಲಿ ಆಗಲಿ, ಬೃಹನ್ನಳೆ, ನೀನು ಅಂತಃಪುರಕ್ಕೆ ಹೋಗು.

254 ಬೃಹನ್ನಳೆ– ಮಹಾರಾಜನ ಅಪ್ಪಣೆಯಂತೆ.

255 ಭಗವಾನ್—ಅರ್ಜುನ, ಕೂಡದು; ನೀನಿನ್ನು (ಅಂತಃಪುರವನ್ನು) ಪ್ರವೇಶಿಸಕೂಡದು. ನಾವು ಪ್ರತಿಜ್ಞೆಯನ್ನು ಈಡೇರಿಸಿಬಿಟ್ಟಿದ್ದೇವೆ.

256 ಅರ್ಜುನ—ಆರ್ಯನ ಅಪ್ಪಣೆಯಂತೆ.

257 ರಾಜ–ಶೂರರೂ ಸತ್ಯಸಂಧರೂ ಪ್ರತಿಜ್ಞೆಯನ್ನು ಪಾಲಿಸತಕ್ಕವರೂ ಆದ ಪಾಂಡವರ ವಾಸದಿಂದ ನನ್ನ ಕುಲ ಕಲ್ಮಷಗಳನ್ನೆಲ್ಲ ಕಳೆದುಕೊಂಡಿದೆ. [೬೬]

258 ಅಭಿಮನ್ಯು–ಇಲ್ಲಿರುವ ಈ ಪೂಜ್ಯರೇ ನನ್ನ ಪಿತೃಗಳು! ಆದ್ದರಿಂದಲೇ

259 ನನ್ನಿಂದ ಅಧಿಕ್ಷಿಪ್ತರಾದರೂ ಕೋಪಗೊಳ್ಳಲಿಲ್ಲ; ನಗುತ್ತಲೇ ನನ್ನನ್ನು ಮೂದಲಿಸುತ್ತಿದ್ದರು. ಯಾವ ಗೋಗ್ರಹಣದಿಂದ ನನ್ನ ಪಿತೃಗಳು ನನಗೆ ತೋರಿಸಲ್ಪಟ್ಟರೋ, ಅದು ಅದೃಷ್ಟವಶಾತ್ ಶುಭವಾಗಿ ಕೊನೆಗೊಂಡಿತು. [೬೭]

260 (ಭೀಮಸೇನನನ್ನು ಕುರಿತು) ತಂದೆಯೆ!

261 ಮೊದಲು ನೀನು ನನ್ನಿಂದ ವಂದಿಸಲ್ಪಡದಿದ್ದುದು (ನನ್ನ) ಅಜ್ಞಾನದಿಂದಾದ್ದರಿಂದ ಆ ಪುತ್ರಾಪರಾಧವನ್ನು (ಮನ್ನಿಸುವ) ಅನುಗ್ರಹ ಮಾಡಬೇಕು. [೬೮]

262 ಭೀಮಸೇನ—ಬಾ, ಬಾ ವತ್ಸ! ತಂದೆಗೆ ಸದೃಶವಾದ ಪರಾಕ್ರಮವುಳ್ಳವನಾಗು.

263 ಅಭಿಮನ್ಯು—ಅನುಗೃಹೀತನಾದೆ,

264 ಭೀಮಸೇನ—ಪುತ್ರ, ತಂದೆಗೆ ಅಭಿವಾದನಮಾಡು.

265 ಅಭಿಮನ್ಯು—ತಂದೆಯೆ, ಅಭಿವಾದನಮಾಡುತ್ತೇನೆ.

266 ಅರ್ಜುನ—ಬಾ, ಬಾ ವತ್ಸ! (ಆಲಿಂಗಿಸಿಕೊಂಡು)

267 ಹೃದಯಕ್ಕೆ ಆಹ್ಲಾದವುಂಟುಮಾಡತಕ್ಕ ಆ (ಹಿಂದಿನ) ಪುತ್ರಶರೀರದ ಆಲಿಂಗನವು, (ಮಧ್ಯೆ) ತಪ್ಪಿಹೋಗಿದ್ದು, ಈಗ ಹದಿಮೂರು ವರ್ಷಗಳ ಬಳಿಕ ಪುನಃ ದೊರಕಿದೆ. [೬೯]

268 ಪುತ್ರ, ವಿರಾಟೇಶ್ವರನು ವಂದಿಸಲ್ಪಡಲಿ.

269 ಅಭಿಮನ್ಯು—ಅಭಿವಾದನಮಾಡುತ್ತೇನೆ.

270 ರಾಜ—ಬಾ ವತ್ಸ, ಬಾ.

271 ನೀನು ಯುಧಿಷ್ಠಿರನ ಧೈರ್ಯವನ್ನೂ ಭೀಮನ ಬಲವನ್ನೂ ಅರ್ಜುನನ ನೈಪುಣ್ಯವನ್ನೂ ಮಾದ್ರೀಸುತರ ಕಾಂತಿ–ಅಭಿರೂಪ್ಯಗಳನ್ನೂ ಜಗತ್ಪ್ರಿಯನಾದ ಕೃಷ್ಣನ ಕೀರ್ತಿಯನ್ನೂ ಪಡೆ. [೭೦]

272 (ಆತ್ಮಗತ) ಉತ್ತರೆಯ ಜತೆಯಲ್ಲೇ (ಅರ್ಜುನ) ಇದ್ದುದು ನನ್ನನ್ನು ಬಾಧಿಸುತ್ತಿದೆ. ಈಗೇನು ಮಾಡಲಿ? ಸರಿ, ತಿಳಿಯಿತು. ಯಾರಲ್ಲಿ?

273 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ!

274 ರಾಜ—ನೀರು.

275 ಭಟ—ಮಹಾರಾಜನ ಅಪ್ಪಣೆಯಂತೆ. (ಹೊರಕ್ಕೆ ಹೋಗಿ, ಪುನಃ ಪ್ರವೇಶಿಸಿ) ಇದೋ ನೀರು.

276 ರಾಜ—ಅರ್ಜುನ, ಗೋಗ್ರಹಣದ ವಿಜಯದ ಕಾಣಿಕೆಗಾಗಿ ಉತ್ತರೆಯನ್ನು ಪ್ರತಿಗ್ರಹಿಸು.

277 ಭಗವಾನ್—ಈಗ ತಲೆ ತಗ್ಗಿಹೋಯಿತು!

278 ಅರ್ಜುನ—(ಆತ್ಮಗತ) ಇದೇನು ನನ್ನ ಚಾರಿತ್ರವನ್ನು ಪರೀಕ್ಷಿಸುತ್ತಿದ್ದಾನೋ? (ಪ್ರಕಾಶ) ಎಲೌ ರಾಜನೆ!

279 (ನಿನ್ನ) ಅಂತಃಪುರದವರೆಲ್ಲ ನನಗೆ ಇಷ್ಟರು; ತಾಯಂದಿರಂತೆ ನನ್ನಿಂದ ಪೂಜಿತರಾಗಿದ್ದಾರೆ. ನಿನ್ನಿಂದ ಕೊಡಲ್ಪಟ್ಟ ಈ ಉತ್ತರೆ ನನ್ನ ಮಗನಿಗಾಗಿ ಪ್ರತಿಗ್ರಹಿಸಲ್ಪಟ್ಟಿದ್ದಾಳೆ. [೭೧]

280 ಭಗವಾನ್—ಈಗ ತಲೆ ಮೇಲೆದ್ದಿತು.

281 ರಾಜ—ಆಗಲಿ. ಪಿತಾಮಹನ ಹತ್ತಿರಕ್ಕೆ ಉತ್ತರನನ್ನು ಕಳುಹಿಸೋಣ. ಧರ್ಮರಾಜ, ವೃಕೋದರ, ಧನಂಜಯ, ನೀವೆಲ್ಲ ಈಕಡೆ ಬನ್ನಿ.

(ಎಲ್ಲರೂ ಹೋಗುತ್ತಾರೆ)

ಎರಡನೆಯ ಅಂಕ ಮುಗಿಯಿತು.

# ಮೂರನೆಯ ಅಂಕ

[1] (ಬಳಿಕ ಸೂತನು ಪ್ರವೇಶಿಸುತ್ತಾನೆ)

[2] ಸೂತ—ಓಹೋ! ತಿಳಿಸಿರಿ, ಸರ್ವಕ್ಷತ್ರಿಯರಿಗೂ ಆಚಾರ್ಯನಾದ ದ್ರೋಣನೇ ಮುಂದಾಳಾಗಿರತಕ್ಕ ಕ್ಷತ್ರಿಯರೆಲ್ಲರಿಗೂ ತಿಳಿಸಿರಿ. "ಇದೋ—

[3] ನಾರಾಯಣನ ಚಕ್ರದಿಂದಾಗುವ ಭಯವನ್ನೂ ತಳ್ಳಿಹಾಕಿ, ಚಿರ ಕಾಲದಿಂದ ಪತ್ತೆಯಿಲ್ಲದೆ ಹೋಗಿರುವ (ಪಾಂಡವ) ಬಂಧುಗಳನ್ನೂ ಲೆಕ್ಕಿಸದೆ, ಬಿಲ್ಲುಹಿಡಿದ ಕೌರವರಿಂದ ರಕ್ಷಿಸಲ್ಪಡದ ಅಭಿಮನ್ಯು ಅಪಹೃತನಾಗಿಬಿಟ್ಟ! ನಾಚಿಕೆಗೇಡು!" [೧]

[4] (ಬಳಿಕ ಭೀಷ್ಮದ್ರೋಣರು ಪ್ರವೇಶಿಸುತ್ತಾರೆ)

[5] ದ್ರೋಣ—ಸೂತನೇ, ಹೇಳು ಹೇಳು—

[6] ಯಾರಿಂದ ನನ್ನ ಶಿಷ್ಯನ ಮಗ (ಅಭಿಮನ್ಯು) ರಣರಂಗದಿಂದ ಕೊಂಡೊಯ್ಯಲ್ಪಟ್ಟನು? ದೇವತೆಗಳೇ ಆಗಿರುವ ನನ್ನೀ ಬಾಣಗಳೊಂದಿಗೆ ಯುದ್ಧ ಮಾಡಬಯಸುವವನು ಯಾವನು? (ಆ) ಪುರುಷನ ಸಾರವನ್ನು ತಿಳಿಸು. ಬಲಿಷ್ಠರಾದ ದೂತರನ್ನೋ ಎಂಬಂತೆ ಅಸ್ತ್ರವನ್ನೋ ಅಥವಾ ಸೈನ್ಯ ವನ್ನೋ (ಅವನೆಡೆಗೆ) ಕಳುಹಿಸುತ್ತೇನೆ. [೨]

[7] ಭೀಷ್ಮ—ಸೂತನೇ, ಹೇಳು ಹೇಳು.—

[8] ಸೋತಾಗ ಹಿಮ್ಮೆಟ್ಟುವುದರಲ್ಲಿ ಪಳಗದ ದೋಷವುಳ್ಳವನೂ, ತಾರುಣ್ಯ ಭಾವದಿಂದ ವಿಳಂಬಮಾಡುತ್ತಿದ್ದವನೂ ಆದ ಈ ಮರಿಯಾನೆ (ಯಂತಹಅಭಿ ಮನ್ಯು) ಆನೆಯ ಹಿಂಡು ಹೊರಟುಹೋದ ಮೇಲೆ, ಆನೆ ಹಿಡಿಯುವುದರಲ್ಲಿ ತೊಡಗಿದ್ದ ಆದಾವನಿಂದ ಹಿಡಿಯಲ್ಪಟ್ಟ? [೩]

[9] (ಬಳಿಕ ದುರ್ಯೋಧನ, ಕರ್ಣ, ಶಕುನಿ ಪ್ರವೇಶಿಸುತ್ತಾರೆ)

[10] ದುರ್ಯೋಧನ—ಸೂತನೆ, ಹೇಳು ಹೇಳು, ಅಭಿಮನ್ಯು ಯಾರಿಂದ ಕೊಂಡೊಯ್ಯಲ್ಪಟ್ಟ? ನಾನೇ ಅವನನ್ನು ಬಿಡಿಸುತ್ತೇನೆ. ಯಾಕೆಂದರೆ—

[11] ಅವನ ತಂದೆಯರೊಡನೆ ನನಗೆ ಜ್ಞಾತಿಕಲಹ ಇದ್ದೇ ಇದೆ. ಆ ಕಾರಣದಿಂದ ಈಗ ಆಡುವವರಿಂದ ನನ್ನಮೇಲೆ ದೋಷ ಹೊರಿಸಲ್ಪಡಲಾಗದು. ಅದಲ್ಲದೆ, ಅವನು (ಮೊದಲು) ನನಗೆ, ಆಮೇಲೆ ಪಾಂಡವರಿಗೆ, ಮಗ. ಕುಲ ವಿರೋಧವಿದ್ದರೂ ಬಾಲಕರು ತಪ್ಪಿತಸ್ಥರಾಗರು. [೪]

[12] ಕರ್ಣ—ತುಂಬ ವಾತ್ಸಲ್ಯದಿಂದಲೂ (ನಿನಗೆ) ಅನುರೂಪವಾಗಿಯೂ ಹೇಳಿದೆ. ಗಾಂಧಾರೀಪುತ್ರನೇ!

[13] ಸ್ವಜನ ಎಂಬ ಬುದ್ಧಿಯಿಂದ ಬೇಡಲೇ ಬೇಡ. ಆದರೆ ನಿನಗೆ ಪ್ರಿಯವನ್ನೆಸಗುವುದಕ್ಕಾಗಿ ಅಭಿಮನ್ಯು ರಣರಂಗದಲ್ಲಿ ಬಾಲಭಾವದಿಂದ ಕಷ್ಟಕ್ಕೀಡಾದ. ನಮ್ಮಿಂದ (ಅವನಂತು) ಪರಿರಕ್ಷಿತನಾಗಲಿಲ್ಲ; ಧನುಸ್ಸನ್ನು ತೊರೆದು ನಾರುಮಡಿ(ಯಾದರೂ) ಧರಿಸಲ್ಪಡಲಿ. [೫]

[14] ಶಕುನಿ—ಸೌಭದ್ರನಿಗೆ ಅನೇಕ ರಕ್ಷಕರಿದ್ದಾರೆ. (ಅವನು) ವಿಮುಕ್ತನಾದಂತೆಯೇ ಎಂದು ಭಾವಿಸಿಕೊಳ್ಳಿ. ಯಾಕೆಂದರೆ—

[15] ಅರ್ಜುನಪುತ್ರನೆಂದು ತಿಳಿದು ರಾಜಾ ವಿರಾಟನು ತಾನಾಗಿಯೇ (ಅಭಿಮನ್ಯುವನ್ನು) ಬಿಟ್ಟುಬಿಡಬಹುದು. ದಾಮೋದರನು ಇಂದು ರಣರಂಗದಿಂದ ದೂರವಿದ್ದನೆಂಬುದನ್ನು ನೆನೆದು ಕೂಡ ಪರಾಜಿತನಾದ ಅಭಿಮನ್ಯುವನ್ನು (ವಿರಾಟ) ಬಿಟ್ಟುಬಿಡಬಹುದು. ಅಥವಾ ಕ್ರೋಧದಿಂದ ಎತ್ತಿ ಬೀಸಿದ ಹಲಾಯುಧವುಳ್ಳವನೂ ಪ್ರಲಂಬಾಸುರ ಸಂಹಾರಿಯೂ ಆದ ಬಲರಾಮನಿಗೆ ಹೆದರಿ ಬಿಡುಗಡೆಮಾಡಬಹುದು. ಮೆರೆಯುತ್ತಿರುವ ಶತ್ರುಗಳನ್ನು ಕೊಂದು ಆ ಬಲಶಾಲಿಯಾದ ಭೀಮನೇ ಅವನನ್ನು ಇಲ್ಲಿಗೆ ಕರೆತರಬಹುದು. [೬]

[16] ದ್ರೋಣ—ಸೂತನೇ, ಹೇಳು ಹೇಳು. ಈಗ ಅವನು ಸೆರೆಯಾದುದು ಹೇಗೆ?

[17] ಅವನ ರಥವೇನಾದರೂ ಉರುಳಿಬಿತ್ತೇ? ಕುದುರೆಗಳೇನಾದರೂ ಚಪಲತೆಯಿಂದ ದುಡುಕಿದುವೆ? ನೆಲ ಚಕ್ರಗಳಿಗೆ ದುರ್ಗಮವಾಗಿತ್ತೆ? ಬತ್ತಳಿಕೆಯಲ್ಲಿನ ಬಾಣ ಮುಗಿದುಹೋಯ್ತುವೆ? ನೀನೇನಾದರೂ ಅವನಿಗೆ ಸರಿಯಾಗಿರಲಿಲ್ಲವೆ? ಹೆದೆ ಕಿತ್ತುಹೋಗಿ ಬಿಲ್ಲು ವಿಫಲವಾಗಿಬಿಟ್ಟಿತೆ? ರಥಾರೂಢರಾದವರಿಗೆ ಯುದ್ಧದಲ್ಲಿ ಸಂಭವಿಸುವ ಈ ಆಪತ್ತುಗಳು ದೈವಕೃತವಾದುವು. ಬಾಣಗಳ ಮೂಲಕವಾಗಿಯೂ ಶತ್ರುಗಳಿಂದ ಸೋಲುಂಟುಮಾಡಲ್ಪಡುತ್ತದೆ. ಆದರೆ ಆ ಅಭಿಮನ್ಯು (ಯುದ್ಧಕಲೆಯಲ್ಲಿ) ಸುಶಿಕ್ಷಿತ. [೭]

[18] ಸೂತ—ಆಯುಷ್ಮಂತನೇ, ಧನುರ್ವಿದ್ಯೆಯೇ ಅಪಾಯಮಯವಾದುದು. ಆಯುಷ್ಮಂತನಾದ ನಿನಗೆ ಗೊತ್ತಿಲ್ಲವೆ?

[19] ನೀನಾಡಿದ ದೋಷಗಳೂ ಸಂಭವಿಸಲಿಲ್ಲ. ಆ ಮಹಾರಥನೂ ಬಾಣಗಳ ಸುರಿಮಳೆಯೇ ಆಗಿದ್ದ. ನನ್ನ ರಥವಾದರೋ ಗಾಳಿಯಿಲ್ಲದೆಯೇ ತಿರುಗು

ತ್ತಿದ್ದ ಗಿರಗಟ್ಟೆಯಂತೆ ಇತ್ತು. ಆದರೂ ಮೇಲೇರಿಬಂದ ಪದಾತಿಯೊಬ್ಬನಿಂದ ಅವನು ಗೃಹೀತನಾಗಿಯೇ ಬಿಟ್ಟ. [೮]

20 ಎಲ್ಲರೂ—ಹೇಗೆ? ಪದಾತಿಯಿಂದಲೆ?

21 ದ್ರೋಣ—ಆ ಪದಾತಿಯಾದರೂ ಹೇಗಿದ್ದ?

22 ಸೂತ-ಯಾವುದನ್ನು ತಿಳಿಸಲಿ? ರೂಪವನ್ನೋ, ಪರಾಕ್ರಮವನ್ನೋ?

23 ಭೀಷ್ಮ—ರೂಪದಿಂದ ಸ್ತ್ರೀಯರು ವರ್ಣಿಸಲ್ಪಡುತ್ತಾರೆ; ಪರಾಕ್ರಮದಿಂದ ಪುರುಷರು. ಆದ್ದರಿಂದ ಅವನ ಪರಾಕ್ರಮವನ್ನು ತಿಳಿಸು.

24 ಸೂತ—ಆಯುಷ್ಮಂತನೆ!

25 ದುರ್ಯೋಧನ—ಇದೇಕೆ, ಯಾವನೋ ಒಬ್ಬ ನಿಮ್ಮಿಂದ (ಈರೀತಿ) ಗರ್ವಿತಾಕ್ಷರಗಳಿಂದ ಹೊಗಳಲ್ಪಡುತ್ತಿದ್ದಾನೆ? ಅವನು ವೇಗದಲ್ಲಿ ವಾಯುವೇ ಆಗಿದ್ದರೂ ನನಗೇನೂ ಭಯವಿಲ್ಲ. ಹೇಳು. [೯]

26 ಸೂತ—ಮಹಾರಾಜನು ಆಲಿಸಬೇಕು. ಅವನಿಂದಲಾದರೋ,

27 ವೇಗದಿಂದ ಕುದುರೆಗಳನ್ನು ದಾಟಿ (ಬಂದು), ರಥದ ಮೇಲೆ ಕೈಯಿಡಲ್ಪಟ್ಟಿತು. ಅಷ್ಟಕ್ಕೇ, ಕುತ್ತಿಗೆಗಳನ್ನು ಮುಂದಕ್ಕೆ ಚಾಚಿದ್ದ ಕುದುರೆಗಳನ್ನು ಹೂಡಿದ್ದ ರಥವು ಅಲುಗಾಡದೆ ನಿಂತುಬಿಟ್ಟಿತು. [೧೦]

28 ಭೀಷ್ಮ—ಹಾಗಾದರೆ, ಆಯುಧಗಳನ್ನು ಇಟ್ಟುಬಿಡಿ.

29 ಎಲ್ಲರೂ—ಏತಕ್ಕೆ?

30 ಭೀಷ್ಮ—ರಥವು ಕೈಯಿಂದಲೇ ತಡೆಯಲ್ಪಟ್ಟ ವೇಗವುಳ್ಳದ್ದಾಗಿದ್ದರೆ ಆ ಅಭಿಮನ್ಯು ವೃಕೋದರನ ತೊಡೆಯ ಮೇಲಿದ್ದಾನೆಂದು ಭಾವಿಸಿರಿ. ಹಿಂದೆ ದ್ರುಪದರಾಜನ ಮಗಳನ್ನು ಅಪಹರಿಸಿಕೊಂಡು ಬರುತ್ತಾ ಜಯದ್ರಥ ಪದಾತಿಯಾಗಿದ್ದ ಅವನಿಂದ ಪರಾಜಿತನಾಗಿಬಿಟ್ಟನಲ್ಲವೆ? [೧೧]

31 ದ್ರೋಣ—ಗಾಂಗೇಯನು ಹೇಳಿದ್ದು ಸರಿ. ಬಾಲ್ಯದಲ್ಲಿ ಉಪದೇಶ ಮಾಡುತ್ತಿದ್ದಾಗಿನಿಂದ ಅವನ ವೇಗವನ್ನು ನಾನು ಬಲ್ಲೆ. ಬಾಣ ಮತ್ತು ಅಸ್ತ್ರಗಳನ್ನು ಅಭ್ಯಾಸಮಾಡುವ ಶಾಲೆಯಲ್ಲಿ (ಒಂದುಸಲ)

32 ಕಿವಿಯವರೆಗೆ ಎಳೆದಿದ್ದ ಬಾಣ ಅವನಿಂದ ಪ್ರಯೋಗಿಸಲ್ಪಡಲಾಗಿ ಅವನ ತಲೆ ಅಲ್ಲಾಡಿತೆಂದು ನಾನು ಹೇಳಿದೆ. ಆ ಕೂಡಲೇ ಅವನು ಬಾಣಕ್ಕೆ ಸಮನಾಗಿ (ವೇಗದಿಂದ) ಹೋಗಿ ಗುರಿಮುಟ್ಟುವುದಕ್ಕೆ ಮುಂಚಿತವಾಗಿಯೇ ಆ ಬಾಣವನ್ನು ಹಿಡಿದುಕೊಂಡುಬಿಟ್ಟ. [೧೨]

33 ಶಕುನಿ—ಒಹೋ! ಎಂತಹ ಹಾಸ್ಯಾಸ್ಪದವಾದ ಹೇಳಿಕೆ!

34 ಲೋಕದಲ್ಲಿ ಬಲಿಷ್ಠನಾದವನು ಬೇರಾವನೂ ಇಲ್ಲವೇ ಇಲ್ಲವೆ? ಎಲ್ಲವೂ (ನಿಮಗೆ) ಇಷ್ಟರಾದವರಲ್ಲೇ (ಇರುವುದಾಗಿ) ಹೇಳಲಾಗುತ್ತಿದೆ. ಜಗತ್ತನ್ನೆಲ್ಲಾ ವ್ಯಾಪಿಸಿಕೊಂಡಿರುವಂತೆ, ಪಾಂಡವರನ್ನು ನೀವೆಲ್ಲ ಕಾಣುತ್ತಿರುವಿರೇನು? [೧೩]

35 ಭೀಷ್ಮ—ಗಾಂಧಾರರಾಜ, ಎಲ್ಲವೂ ಅನುಮಾನ (ಪ್ರಮಾಣ)ದಿಂದ ಹೇಳಲ್ಪಡುತ್ತಿದೆ.

36 ನಾವು ರಥಾರೂಢರಾಗಿ, ಶಸ್ತ್ರಗಳನ್ನೂ ಬಿಲ್ಲುಗಳನ್ನೂ ಆಶ್ರಯಿಸಿಕೊಂಡು, ರಣರಂಗಕ್ಕೆ ಹೋಗುತ್ತೇವೆ. ಬರಿಯ ತೋಳುಗಳೊಡನೆ ಯುದ್ಧಕ್ಕೆ ಹೋಗುವವರು ಇಬ್ಬರೇ ಇಬ್ಬರು— ಹಲಾಯುಧ ಮತ್ತು ವೃಕೋದರ. [೧೪]

37 ಶಕುನಿ—ಸಾಹಸಪ್ರಿಯರಾದ ನಾವು ಅನಿರೀಕ್ಷಿತವಾಗಿ ಒಬ್ಬನೇ ಒಬ್ಬ (ಉತ್ತರ)ನಿಂದ ಪರಾಜಿತರಾದೆವು. ಆ ಉತ್ತರನನ್ನೇ ಕೆಲವರು ಫಲ್ಗುಣನೆಂದೂ ಹೇಳಿಬಿಡಬಹುದು. [೧೫]

38 ದ್ರೋಣ—ಗಾಂಧಾರರಾಜನೇ, ಇದರಲ್ಲೂ ನಿನಗೆ ಸಂದೇಹವೆ?

39 ಪ್ರಯೋಗಮಾಡಿದಾಗ ಬರಸಿಡಿಲಿನಂತೆ ಗರ್ಜಿಸುವ ಬಿಲ್ಲನ್ನು ರಣರಂಗದಲ್ಲಿ ಉತ್ತರನೂ ಬಗ್ಗಿಸಬಲ್ಲನೆ? ಸೂರ್ಯನೂ ಬಿಸಿಲಿಲ್ಲದಂತಾಗಿ ಮುಹೂರ್ತಕಾಲ ಅಸ್ತಗೊಳ್ಳುವಂತೆ ಉತ್ತರನ ಬಾಣಗಳಿಂದ ಮಾಡಲ್ಪಟ್ಟನೆ? [೧೬]

40 ಭೀಷ್ಮ—ಗಾಂಧಾರೀಪುತ್ರನೇ!

41 ಬಾಣಗಳ ಗರಿಗಳ ಮೇಲೆ (ಬರೆದಿರುವ) ಅಕ್ಷರಗಳುಳ್ಳ ಮತ್ತು ಬಿಲ್ಲಿನ ಹೆದೆಯೆಂಬ ನಾಲಗೆಯಿಂದ ಹೊರಗೆಡಹಲ್ಪಟ್ಟ 'ಪಾರ್ಥನಿಂದಲೇ (ಬಿಲ್ಲು) 'ಬಗ್ಗಿಸಲ್ಪಟ್ಟಿತು' ಎಂಬ ಮಾತುಗಳಿಂದ ತುಂಬ ಸ್ಪಷ್ಟವಾಗಿಯೇ ತಿಳಿಸಲ್ಪಡುತ್ತಿದೆಯೆಂಬುದನ್ನು ನೀನೂ ಬಲ್ಲೆಯಲ್ಲವೇ—ಆದರೂ ನೀನು (ಅದಕ್ಕೆ) ಕಿವಿಗೊಡುತ್ತಿಲ್ಲ. [೧೭]

42 (ಪ್ರವೇಶಿಸಿ) ಸೂತ—ಆಯುಷ್ಮಂತನಿಗೆ ಜಯವಾಗಲಿ. ಶಾಂತಿಕರ್ಮಗಳನ್ನು ನಡೆಸುವುದಾಗಲಿ.

43 ಭೀಷ್ಮ—ಏತಕ್ಕಾಗಿ?

44 ಸೂತ—ನಿನ್ನ ಧ್ವಜಕ್ಕೇ ಬಾಣ ನಾಟಿಕೊಂಡಿರುವುದರಿಂದ ನೀನೇ ಮುಂಚಿತವಾಗಿ (ಶಾಂತಿ) ಆಚರಿಸುವುದು ಉಚಿತ. ಇದೋ ಆ ಬಾಣ. ಗರಿಯ ಮೇರೆ ಯಾರದೋ ಹೆಸರು ನಮೂದಾಗಿದೆ. [೧೮]

45 ಭೀಷ್ಮ—(ಇಲ್ಲಿ) ತಾ. (ಸೂತನು ತಂದುಕೊಡುತ್ತಾನೆ)

46 ಭೀಷ್ಮ—(ತೆಗೆದುಕೊಂಡು ನೋಡಿ) ವತ್ಸ ಗಾಂಧಾರರಾಜ! ಮುಪ್ಪಿನಿಂದ ಶಿಥಿಲವಾಗಿದೆ ನನ್ನ ಕಣ್ಣು. ಈ ಬಾಣವನ್ನು ಓದು.

47 ಶಕುನಿ— (ತೆಗೆದುಕೊಂಡು ಓದಿ) ಅರ್ಜುನನ...

(ಎಂದು ಎಸೆದುಬಿಡುತ್ತಾನೆ. ಅದು ದ್ರೋಣನ ಕಾಲುಗಳಲ್ಲಿ ಬೀಳುತ್ತದೆ.)

48 ದ್ರೋಣ—(ಬಾಣವನ್ನು ಕೈಗೆತ್ತಿಕೊಂಡು) ಬಾ, ಬಾ ವತ್ಸ!

49 ಇದು ಗಾಂಗೇಯನನ್ನು ವಂದಿಸುವುದಕ್ಕಾಗಿ ನನ್ನ ಶಿಷ್ಯನಿಂದ ಬಿಡಲ್ಪಟ್ಟ ಬಾಣ. ಕ್ರಮವಾಗಿ (ಅದು) ನನ್ನನ್ನು ವಂದಿಸಲು (ಈಗ) ನೆಲದಲ್ಲಿ ನನ್ನ ಕಾಲುಗಳ ಮೇಲೆ ಬಿದ್ದಿದೆ. [೧೯]

50 ಶಕುನಿ—ಕೂಡದು. ಬಾಣದ ರುಜುವಾತನ್ನು ಈಗ ನಂಬಕೂಡದು.

51 ಅರ್ಜುನನೆಂಬ ಹೆಸರಿನ ಬೇರೊಬ್ಬ ಯೋಧನಿರಬಹುದು. ಅವನಿಂದ ಈ ಬಾಣ ಎಸೆಯಲ್ಪಟ್ಟಿರಬಹುದು. (ಆದ್ದರಿಂದ) ಉತ್ತರನಿಂದಲೂ ಲಿಖಿತ (ಪ್ರಮಾಣ)ವೇನನ್ನಾದರೂ ಪ್ರಕಾಶಕ್ಕೆ ತನ್ನಿ. [೨೦]

52 ದುರ್ಯೋಧನ—ಅವರಿಗೆ ರಾಜ್ಯ ಕೊಡಬೇಕೆಂದು ಸುಳ್ಳಾಡುತ್ತಿರುವುದಾದರೆ ಯುಧಿಷ್ಠಿರನನ್ನು ಕಣ್ಣಾರ ಕಂಡಮೇಲೇ ರಾಜ್ಯಾರ್ಧವನ್ನು ನಾ ಕೊಡುವೆನು. [೨೧]

53 (ಪ್ರವೇಶಿಸಿ) ಭಟ—ಮಹಾರಾಜನಿಗೆ ಜಯವಾಗಲಿ. ವಿರಾಟನಗರದಿಂದ ದೂತ ಬಂದಿದ್ದಾನೆ.

54 ದುರ್ಯೋಧನ—ಒಳಕ್ಕೆ ಬರಮಾಡು.

55 ಭಟ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

56 (ಬಳಿಕ ಉತ್ತರ ಪ್ರವೇಶಿಸುತ್ತಾನೆ)

57 ಉತ್ತರ—ಅತಿಶಯವಾದ ವೇಗದ ಕುದುರೆ ಹೂಡಿಕೊಂಡು ರಥದಲ್ಲಿ ಕುಳಿತು ಸ್ವಲ್ಪವೇ ದೂರ ಬರುತ್ತಿದ್ದರೂ ನನಗೆ ತುಂಬ ವಿಳಂಬವಾಗಿಬಿಟ್ಟಿತು. ಎಲ್ಲ ಕಡೆಯೂ ಅರ್ಜುನನ ಬಾಣಗಳಿಂದ ಹತವಾದ ಆನೆಗಳಿಂದ ನೆಲ ಏರು

ಪೇರಾಗಿದೆ; (ಆದ್ದರಿಂದ) ಕುದುರೆಗಳು ಕಷ್ಟದಿಂದ ಮುಂದೆ ಸಾಗುತ್ತಿದ್ದುವು. [೨೨]

58 (ಪ್ರವೇಶಿಸಿ ಕೈಮುಗಿದುಕೊಂಡು) ಆಚಾರ್ಯನೂ ಮತ್ತು ಪಿತಾಮಹನೂ ಮುಂದಾಗಿರುವ (ಈ) ರಾಜಮಂಡಲವೆಲ್ಲವನ್ನೂ ವಂದಿಸುತ್ತೇನೆ.

59 ಎಲ್ಲರೂ—ಆಯುಷ್ಮಂತನಾಗು.

60 ದ್ರೋಣ—ಶ್ಲಾಘ್ಯನಾದ ವಿರಾಟೇಶ್ವರನು ಏನು ಹೇಳುತ್ತಾನೆ?

61 ಉತ್ತರ—ನಾನು ಆತನಿಂದ ಕಳುಹಿಸಲ್ಪಟ್ಟಿಲ್ಲ.

62 ದ್ರೋಣ—ಹಾಗಾದರೆ, ನೀನು ಯಾರಿಂದ ಕಳುಹಿಸಲ್ಪಟ್ಟಿದ್ದೀ?

63 ಉತ್ತರ—ಪೂಜ್ಯ ಯುಧಿಷ್ಠಿರನಿಂದ.

64 ದ್ರೋಣ—ಧರ್ಮರಾಜನೇನು ಹೇಳುತ್ತಾನೆ?

65 ಉತ್ತರ—ಆಲಿಸೋಣಾಗಲಿ.

66 "ಉತ್ತರೆಯು ನನಗೆ ಸೊಸೆಯಾಗಿ ಲಭಿಸಿದ್ದಾಳೆ. ರಾಜಮಂಡಲವನ್ನು ನಾನು ಪ್ರತೀಕ್ಷಿಸುತ್ತಿದ್ದೇನೆ. ವಿವಾಹ ಅಲ್ಲೇ ಆಗಲೋ, ಇಲ್ಲೇ ಆಗಲೋ? ಎಲ್ಲಿ ನಡೆಸುವುದು?" [೨೩]

67 ಶಕುನಿ—ಅಲ್ಲೇ ಅಲ್ಲೇ.

68 ದ್ರೋಣ—ನಾವು ಇತ್ಯರ್ಥಕ್ಕೆ ತರಲ್ಪಟ್ಟಿದ್ದೇವೆ. ಪಂಚರಾತ್ರದ ಅವಧಿ ಇನ್ನೂ ಇದೆ. ಧರ್ಮಮಾರ್ಗದಿಂದ ಕೊಡಲೊಪ್ಪಿದ ಭಿಕ್ಷೆ ಧರ್ಮಮಾರ್ಗದಿಂದಲೇ ಕೊಡಲ್ಪಡಲಿ. [೨೪]

69 ದುರ್ಯೋಧನ—ಆಗಲಿ. ಮೊದಲಿನಂತೆಯೇ ರಾಜ್ಯವು ಪಾಂಡವರಿಗೆ ನನ್ನಿಂದ ಕೊಡಲ್ಪಟ್ಟಿದೆ. ಯಾಚಿತವಾದ ಭೈಕ್ಷ್ಯದ ವಿಚಾರದಲ್ಲೂ ಸತ್ಯ ನಿಲ್ಲುವುದಾದರೆ ಮಾನವರೆಲ್ಲರೂ (ಪ್ರತಿಷ್ಠಿತರಾಗಿ) ನಿಲ್ಲುತ್ತಾರೆ. [೨೫]

70 ದ್ರೋಣ—ಭಲೆ! (ಎರಡೂ) ಕುಲಗಳ ಏಳಿಗೆಯನ್ನು ಸಾಧಿಸಿರುವ ನಾವೆಲ್ಲ ಪ್ರಸನ್ನರಾದೆವು. ಈ ಎಲ್ಲ ಭೂಮಿಯನ್ನೂ ನಮ್ಮ ರಾಜಸಿಂಹನು ಆಳಲಿ. [೨೬]

(ಎಲ್ಲರೂ ಹೋಗುತ್ತಾರೆ)

ಮೂರನೆಯ ಅಂಕ ಮುಗಿಯಿತು

## ಪಂಚರಾತ್ರ ಸಮಾಪ್ತ

# ಟಿಪ್ಪಣಿಗಳು

## ಅಂಕ ೧

ಪಂಚರಾತ್ರಂ—ಪಂಚಾನಾಂ ರಾತ್ರೀಣಾಂ ಸಮಾಹಾರಃ. ಇಲ್ಲಿ ರಾತ್ರಿ ಶಬ್ದವನ್ನು, 'ಅಹೋರಾತ್ರ' 'ದಿವಸ' ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಪಂಚರಾತ್ರಂ (ಅವಧಿಃ) ಯಸ್ಯ ತತ್ ನಾಟಕಂ—ಪಂಚರಾತ್ರಂ. ಅಥವಾ ಪಂಚ ರಾತ್ರಂ (ಅವಧಿಂ) ಅಧಿಕೃತ್ಯ ಕೃತೋ ಗ್ರಂಥಃ—ಪಂಚರಾತ್ರಂ. ವಸ್ತುತಃ ಈ ನಾಟಕದ ಕಥೆ ಐದೇ ದಿವಸಗಳ ಅವಧಿಯಲ್ಲಿ ನಡೆಯತಕ್ಕದ್ದು. ಅಲ್ಲದೆ ಐದು ದಿವಸ ಗಳ ಅವಧಿಯಲ್ಲಿ ಪಾಂಡವರ ಸುಳಿವನ್ನು ಪತ್ತೆಮಾಡಿದಲ್ಲಿ ಅವರಿಗೆ ತನ್ನ ರಾಜ್ಯದಲ್ಲಿ ಅರ್ಧವನ್ನು ಕೊಡುವುದಾಗಿ ದುರ್ಯೋಧನ ದ್ರೋಣನಿಗೆ ಮಾತು ಕೊಡುವುದು ಮಾತ್ರ ವಲ್ಲದೆ ಮುಂದೆ ಅದೇ ರೀತಿ ನಡೆದುಕೊಂಡ ನಿರೂಪಣೆಯೇ ಈ ನಾಟಕದ ವಸ್ತು. ಈ ವಸ್ತು ಪಂಚರಾತ್ರಂ ಎಂಬ ಹೆಸರಿನಿಂದಲೇ ಸೂಚಿತವಾಗುತ್ತದೆ. ಪಂಚರಾತ್ರಂ ಎಂಬ ಪದ ಈ ನಾಟಕದಲ್ಲಿ ಆರುಕಡೆ ಪ್ರಯೋಗಿಸಲ್ಪಟ್ಟಿದೆ—

I [167] ಯದಿ ಪಂಚರಾತ್ರೇಣ ಪಾಂಡವಾನಾಂ ಪ್ರವೃತ್ತಿರುಪನೇತವ್ಯಾ, ರಾಜ್ಯ ಸ್ಯಾರ್ಧಂ ಪ್ರದಾಸ್ಯತಿ ಕಿಲ.

I [169] ತೇ ಪಂಚರಾತ್ರೇಣ ಮಯೋಪನೇಯಾಃ.

I [183] ಭೋ ಆಚಾರ್ಯ, ಅಭ್ಯುಪಗಮ್ಯತಾಂ ಪಂಚರಾತ್ರಂ.

I [193] ಅಸ್ತು ಪಂಚರಾತ್ರಂ.

III [69] ಇತ್ಯರ್ಥಂ ವಯಮಾನೀತಾಃ ಪಂಚರಾತ್ರೋಽಪಿ ವರ್ತತೇ.

III [71] ಅವಸಿತಂ ಪಂಚರಾತ್ರಂ.

ಪಂಚರಾತ್ರಂ ಎಂಬ ಆಗಮಶಾಸ್ತ್ರದ ಗ್ರಂಥವೂ ಒಂದಿದೆ. ಅದಕ್ಕೂ ಈ ನಾಟಕಕ್ಕೂ ಯಾವ ಸಂಬಂಧವೂ ಇಲ್ಲ.

[1] ನಾಂದ್ಯಂತೇ ತತಃ ಪ್ರವಿಶತಿ....—ಇಲ್ಲಿ ಅಂತೇ ಮತ್ತು ತತಃ ಎಂಬಲ್ಲಿರುವ ಪುನ ರುಕ್ತಿಯನ್ನು ಗಮನಿಸಿ. ನಾಂದಿಯ ಕೊನೆಯಲ್ಲಿ ಬಳಿಕ ಸೂತ್ರಧಾರನ ಪ್ರವೇಶ. ಇದೇ ರಂಗಸೂಚನೆ (Stage direction) ಭಾಸನದೆಂದು ಹೇಳುವ ಎಲ್ಲ ನಾಟಕಗಳ ಆದಿ ಯಲ್ಲೂ (ಮಧ್ಯಮವ್ಯಾಯೋಗ ವಿನಾ) ಬರುತ್ತದೆ. ಸೂತ್ರಧಾರಃ—ನಾಟ್ಯೋಪಕರಣ ಗಳಿಗೆ ಸೂತ್ರ ಎಂದು ಹೆಸರು; ಅಂತಹ ಸೂತ್ರವನ್ನು ಧರಿಸಿರುವವನು ಸೂತ್ರಧಾರ. ಸೂತ್ರಂ ಧಾರಯತಿ ಇತಿ ಸೂತ್ರಧಾರಃ. ನಾಟ್ಯಸ್ಯ ಯದನುಷ್ಠಾನಂ ತತ್ಸೂತ್ರಂ ಸ್ಯಾತ್ ಸಬೀಜಕಂ। ರಂಗದೈವತಪೂಜಾಕೃತ್ ಸ ಸೂತ್ರಧಾರ ಉದೀರಿತಃ॥ ಮತ್ತು

ಸಂಗೀತ ಸರ್ವಸ್ವದಲ್ಲಿ ಹೇಳಿರುವಂತೆ—ವರ್ತನೀಯತಯಾ ಸೂತ್ರಂ ಪ್ರಥಮಂ ಯೇನ ಸೂಚ್ಯತೇ ॥ ರಂಗಭೂಮಿಂ ಸಮಾಕ್ರಮ್ಯ ಸೂತ್ರಧಾರಃ ಸ ಉಚ್ಯತೇ ॥ ತೆರೆಯ ಹಿಂದೆಯೇ ನಾಂದೀ ಮಂಗಳ ಆದಮೇಲೆ ಸೂತ್ರಧಾರ ಪ್ರವೇಶಿಸಿ ಪದ್ಯವೊಂದನ್ನು (ಪ್ರಾಯಃ ತೆರೆಯ ಹಿಂದೆ ಹಾಡಿದ ನಾಂದೀ ಪದ್ಯವನ್ನೇ ಪುನಃ) ಹೇಳುವುದು ಈ ಭಾಸ ನಾಟಕಗಳ ವೈಶಿಷ್ಟ್ಯ. ಆದ್ದರಿಂದಲೇ ಇವಕ್ಕೆ 'ಸೂತ್ರಧಾರ-ಕೃತಾರಂಭ'ಗಳೆಂಬ ಪ್ರಸಿದ್ಧಿ. ಇಷ್ಟದೇವತೆಯನ್ನು ಆನಂದಗೊಳಿಸಿ, ಕೈಗೊಂಡ ಕಾರ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳುವಂತೆ ಮಾಡುವುದು ಈ ನಾಂದೀ ಮಂಗಳದ ಉದ್ದೇಶ. ಪಂಡಿತ ಗಣಪತಿ ಶಾಸ್ತ್ರಿಗಳು 'ನಂದಿಃ ಆನಂದಃ, ತಸ್ಯಾ ಇಯಂ ನಾಂದೀ; ಗೀತ-ವಾದ್ಯ-ವಾದನಾದಿ ರೂಪಾ' ಎಂದು ಭಾಸನ ನಾಂದೀ ಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದಾರೆ.

[2] ಈ ಪದ್ಯ ವಸ್ತುನಿರ್ದೇಶ ಮತ್ತು ಆಶೀರ್ವಚನರೂಪವಾದುದು. "ಆಶೀರ್ವಚನ ಸಂಯುಕ್ತಾ ಸ್ತುತಿರ್ಯಸ್ಮಾತ್ ಪ್ರಯುಜ್ಯತೇ। ದೇವದ್ವಿಜನೃಪಾದೀನಾಂ ತಸ್ಮಾತ್ ನಾಂದೀತಿ ಸಂಜ್ಞಿತಾ ॥" ಎಂಬ ಸಾಹಿತ್ಯದರ್ಪಣದ ಲಕ್ಷಣದ ಮೇರೆಗೆ ಈ ಶ್ಲೋಕವೇ ನಾಂದೀ-ಶ್ಲೋಕವೆಂದರೂ, ತೆರೆಯ ಹಿಂದೆ ಮೊದಲು ಹಾಡಿದ್ದು ಈಗ ಹೊರಗೆ ಸೂತ್ರಧಾರ ಹೇಳುತ್ತಾನೆಂದರೂ ತಪ್ಪಾಗಲಾರದು. ಈ ಪದ್ಯದಲ್ಲಿರುವ ಮುದ್ರಾಲಂಕಾರ ಗಮನಾರ್ಹ. 'ಸೂಚ್ಯಾರ್ಥಸೂಚನಂ ಮುದ್ರಾ ಪ್ರಕೃತಾರ್ಥಪರೈಃ ಪದೈಃ' ಎಂಬುದು ಈ ಅಲಂಕಾರದ ಲಕ್ಷಣ (ಕುವಲಯಾನಂದ ೧೩೯). ಪ್ರಕೃತ ಇಲ್ಲಿ ದ್ರೋಣ, ಅರ್ಜುನ, ಭೀಮ, ಕರ್ಣ, ಶಕುನಿ, ದುರ್ಯೋಧನ, ಭೀಷ್ಮ, ಯುಧಿಷ್ಠಿರ, ವಿರಾಟ, ಉತ್ತರ, ಗೋವು ಮತ್ತು ಅಭಿಮನ್ಯು ಎಂಬ ಹನ್ನೆರಡು ಹೆಸರುಗಳನ್ನು ಇಲ್ಲಿ ಮುದ್ರಾಲಂಕಾರದಿಂದ ಸೂಚಿಸಲಾಗಿದೆ. ಇದೇ ಮುದ್ರಾಲಂಕಾರ ಪ್ರತಿಜ್ಞಾಯೌಗಂಧರಾಯಣ, ಸ್ವಪ್ನವಾಸವದತ್ತ ಮತ್ತು ಪ್ರತಿಮಾನಾಟಕಗಳ ಮೊಟ್ಟಮೊದಲನೆಯ ಪದ್ಯಗಳಲ್ಲೂ ಬರುತ್ತದೆ.

ದ್ರೋಣಃ—ಮೋಡ. ಕರ್ಣಧಾರಃ—ನಾವಿಕನು, ಶಕುನಿ+ಈಶ್ವರಃ=ಪಕ್ಷಿಗಳ ಒಡೆಯ; ಗರುಡ. ದುರ್ಯೋಧನಃ—(ಎದುರಿಸಲು) ಕಷ್ಟ(ಸಾಧ್ಯ)ನಾದ ಯೋಧ. ಭೀಷ್ಮ—ಭಯಂಕರ. ಯುಧಿಷ್ಠಿರಃ (ಯುಧಿ+ಸ್ಥಿರಃ)—ಯುದ್ಧದಲ್ಲಿ ಸ್ಥಿರ(ವಾಗಿ ನಿಲ್ಲುವವ). ವಿರಾಟ್ (ವಿರಾಜ್-ವಿರಾಟ್)—ವಿಶೇಷವಾಗಿ ಹೊಳೆಯುವವನು; ವಿರಾಟ್ ಪುರುಷನು. 'ತಸ್ಮಾತ್ ವಿರಾಡಜಾಯತ'—ಪುರುಷಸೂಕ್ತ, ಋ. ವೇ. X[90] ನೋಡಿ. ಉತ್ತರಃ—ಶ್ರೇಷ್ಠನಾದ [illegible]. ಅಭಿಮನ್ಯುಃ (ಮನ್ಯುಂ ಅಭಿಗಚ್ಛತಿ ಇತಿ)—[illegible]. ಮನ್ಯು=1 ಯಜ್ಞ 2 ದೈನ್ಯ 3 ಕ್ರೋಧ. ಈ ಪದ್ಯ ಕೃಷ್ಣನ ಪರವಾಗಿ ಮಾತ್ರ ಅರ್ಥವುಳ್ಳದ್ದು. ಪ್ರಕೃತ ನಾಟಕದಲ್ಲಿನ ಮುಖ್ಯ ಪಾತ್ರಗಳ ಹೆಸರುಗಳನ್ನು ಉದ್ದೇಶಪೂರ್ವಕವಾಗಿ ಅಳವಡಿಸಿಕೊಂಡು ಈ

ನಾಂದೀಪದ್ಯ ರಚಿತವಾಗಿರುವುದರಿಂದ ಒಟ್ಟು ಅರ್ಥದಲ್ಲಿನ ಸ್ವಾರಸ್ಯ ಕವಿಯ ಗಮನದಲ್ಲಿರಲಿಲ್ಲವೆಂದೇ ಹೇಳಬೇಕು.

[3] ಏವಂ ಆರ್ಯಮಿಶ್ರಾನ್......ಪಶ್ಯಾಮಿ— ಇದೇ ಮಾತು ಇದೇ ಕ್ರಮದಲ್ಲಿ ಭಾಸನದೆಂದು ಹೇಳಲಾಗುತ್ತಿರುವ ದೂತಘಟೋತ್ಕಚ, ಕರ್ಣಭಾರ, ಊರುಭಂಗ, ಮಧ್ಯಮವ್ಯಾಯೋಗ, ಅಭಿಷೇಕ, ಬಾಲಚರಿತ, ದೂತವಾಕ್ಯ ಮತ್ತು ಪಂಚರಾತ್ರ — ಈ ಎಂಟು ನಾಟಕಗಳಲ್ಲಿ ಬರುತ್ತದೆ. ಆದ್ದರಿಂದಲೇ ಅಜ್ಞಾತ ಕರ್ತೃಕಗಳಾದ ಈ ಎಲ್ಲ ನಾಟಕಗಳನ್ನೂ ಬರೆದವನು ಒಬ್ಬನೇ ಕವಿ ಎಂದು ಹೇಳಬಹುದಾಗಿದೆ.

[4] ಅಹೋ......ಯಜ್ಞಸಮೃದ್ಧಿಃ— ಈ ಯಜ್ಞ ಮುಗಿದ ಕೂಡಲೇ ಕೌರವರು ಗೋಗ್ರಹಣಕ್ಕೆ ತೆರಳಿದಂತೆ ಇಲ್ಲಿ ನಿರೂಪಿತವಾಗಿದೆ. ಗೋಗ್ರಹಣವಾದುದು ಪಾಂಡವರ ಅಜ್ಞಾತವಾಸದ ತೀರ ಕೊನೆಯ ದಿವಸಗಳಲ್ಲಿ. ಆ ಸಂದರ್ಭದಲ್ಲಿ ದುರ್ಯೋಧನ ಯಾವ ಯಜ್ಞವನ್ನೇ ಆಗಲಿ ಮಾಡಿದಂತೆ ಮಹಾಭಾರತದಲ್ಲಿ ಹೇಳಿಲ್ಲ. ಯುಧಿಷ್ಠಿರನು ರಾಜಸೂಯಯಾಗ ಮಾಡಿದುದನ್ನು ಕಂಡು, ಅವನ ಮೇಲಿನ ಪೈಪೋಟಿಯಿಂದಲೋ ಎಂಬಂತೆ ದುರ್ಯೋಧನನೂ ಅದೇ ಯಾಗ ಮಾಡಲು ಯತ್ನಿಸುತ್ತಾನೆ. ಆದರೆ ಅದಕ್ಕೆ ಶಾಸ್ತ್ರಾವಕಾಶ ವಿಲ್ಲದೆ ಪೌಂಡರೀಕ ಯಜ್ಞವನ್ನು ಆಚರಿಸಿದುದಾಗಿಯೂ ಅದು ಪಾಂಡವರ ವನವಾಸದ ೧೧ನೆಯ ವರ್ಷದಲ್ಲಿ ನಡೆಯಿತೆಂದೂ ಮಹಾಭಾರತದಿಂದ ತಿಳಿದುಬರುತ್ತದೆ. ಭಾಸನು ಇಲ್ಲಿ ದುರ್ಯೋಧನನು ಆಚರಿಸಿದಂತೆ ವರ್ಣಿಸುತ್ತಿರುವ ಯಾಗದ ಉಲ್ಲೇಖ ಮಹಾಭಾರತದಲ್ಲಿಲ್ಲ. ಈ ಯಜ್ಞದ ಸಮೃದ್ಧಿ I ೧೪, ೧೫, ೧೬ ರಲ್ಲಿ ವರ್ಣಿತವಾಗುತ್ತದೆ.

[5] ಪ್ರೀತ್ಯಾ ಪಾರ್ಥಿವೇಷು ರಾಜಸು— I ೩೩, ೩೫, ೪೭, ೪೯, ೫೧ ರಲ್ಲಿ ಕಂಡುಬರುವಂತೆ ಈ ಯಾಗಕ್ಕೆ ಬಂದಿದ್ದ ಇತರ ರಾಜರು ಭೀಷ್ಮಕ, ಭೂರಿಶ್ರವಸ್, ಅಭಿಮನ್ಯು, ಸಹದೇವ ಮುಂತಾದವರು.

[6] ಯಜ್ಞಃ......ವರ್ತತೇ— ಇಲ್ಲಿ ವರ್ತಮಾನಕಾಲದ ಪ್ರಯೋಗವಿದ್ದರೂ ಯಜ್ಞವು ಆಗಲೇ ಮುಗಿದಿದ್ದಿತೆಂಬುದನ್ನು ಗಮನಿಸಬೇಕು.

[7] ಸ್ಥಾಪನೆ— ಇದಕ್ಕೆ 'ಪ್ರಸ್ತಾವನೆ' 'ಆಮುಖ' ಎಂದೂ ಹೇಳುತ್ತಾರೆ. ಪ್ರಸ್ತಾವನೆ ಸಾಮಾನ್ಯವಾಗಿ ಐದು ವಿಧ—೧) ಉದ್ಘಾತಕ ೨) ಕಥೋದ್ಘಾತ ೩) ಪ್ರಯೋಗಾತಿಶಯ ೪) ಪ್ರವರ್ತಕ ೫) ಅವಗಲಿತ. ಭಾಸನ ನಾಟಕಗಳಲ್ಲಿ 'ಸ್ಥಾಪನೆ' ಎಂಬ ಹೆಸರೇ ಪ್ರಯೋಗಿಸಲ್ಪಟ್ಟಿದೆ. ಕಾಳಿದಾಸ ಮೊದಲಾದವರು 'ಪ್ರಸ್ತಾವನೆ' ಎಂಬ ಹೆಸರನ್ನೇ ಬಳಸಿದ್ದಾರೆ. ಭಾಸನ ಸ್ಥಾಪನೆಗಳು ತೀರ ಚಿಕ್ಕವು. ಅವುಗಳಿಂದ ಕವಿಯ ಹೆಸರಾಗಲಿ, ಅವನ ಆಶ್ರಯದಾತನ ಹೆಸರಾಗಲಿ, ನಾಟಕದ ಹೆಸರಾಗಲಿ ಯಾವುದೂ ತಿಳಿಯುವುದಿಲ್ಲ. ಇತರ ನಾಟಕಗಳ ಪ್ರಸ್ತಾವನೆಯಲ್ಲಿ ಈ ಎಲ್ಲ ವಿಷಯಗಳೂ ಇರುತ್ತವೆ.

[12] ಈ ಪದ್ಯದಲ್ಲೂ ಮುಂದಿನ ಪದ್ಯದಲ್ಲೂ ಯಜ್ಞ ಮುಗಿಸಮೇಲೆ, ಸುತ್ತಮುತ್ತ ಪಶುಪಕ್ಷಿಗಳು, ವೃಕ್ಷಗಳು, ಮನುಷ್ಯರು, ಎಲ್ಲರ ಮೇಲೂ ಅದರ ಪ್ರಭಾವವನ್ನು ವಿವರಿಸಲಾಗಿದೆ. ದ್ವಿಜೋಚ್ಛಿಷ್ಟೈಃ—ಬ್ರಾಹ್ಮಣರು ಊಟಮಾಡಿ (ಎಲೆಯಲ್ಲೇ) ಉಳಿಸಿಬಿಟ್ಟ ಅನ್ನಗಳಿಂದ. ಯಜ್ಞಯಾಗಾದಿಗಳ ಕೊನೆಯಲ್ಲಿ ಬ್ರಾಹ್ಮಣ ಭೋಜನ ವಿಹಿತವಾದುದು. ಅನ್ನ=ಅಗಿದು ತಿನ್ನತಕ್ಕದ್ದು. ಈ ಉಚ್ಛಿಷ್ಟಾನ್ನಗಳೂ ಅರಳಿದ ಕಾಶಪುಷ್ಪಗಳೂ ಬೆಳ್ಳಗಿರುವುದರಿಂದ ಉತ್ಪ್ರೇಕ್ಷೆಗೆ ಅವಕಾಶ. ಸ್ವಪ್ನವಾಸವದತ್ತದಲ್ಲೂ ಕಾಶಪುಷ್ಪಗಳ ಬಿಳಿಯ ಬಣ್ಣದ ಉಲ್ಲೇಖವಿದೆ. ನೋಡಿ—ಶರಚ್ಛಶಾಂಕಗೌರೇಣ ವಾತಾವಿದ್ಧೇನ ಭಾಮಿನಿ। ಕಾಶಪುಷ್ಪಲವೇನೇದಂ ಸಾಶ್ರುಪಾತಂ ಮುಖಂ ಮಮ॥ ಅಂಕ ೪. ಮೃಗೈಸ್ತುಲ್ಯಾಃ ವ್ಯಾಘ್ರಾಃ......—ಹುಲಿ, ಸಿಂಹ ಮುಂತಾದ ದುಷ್ಟ ಮೃಗಗಳು ಸಾಧುಗಳಾಗಿ ಬಿಟ್ಟಿದ್ದುವು ಎಂಬುದು ಫಲಿತಾರ್ಥ.

[13] ಭವಾನ್ ಆಹ—ಇಲ್ಲಿ ಭವತ್ ಶಬ್ದದ ಯೋಗವಿರುವುದರಿಂದ ಕ್ರಿಯಾಪದ ಆಹ ಎಂಬುದು ಪ್ರಥಮ ಪುರುಷದಲ್ಲಿದೆ. 'ಭವದ್ಯೋಗೇ ನ ಮಧ್ಯಮಃ'.

[14] ಅಮರೋತ್ತಮ ಮುಖಂ—ಅಮರಾಣಾಂ ಉತ್ತಮಂ ಮುಖಂ. ದೇವತೆಗಳಿಗೆ ನಾವು ಕೊಡುವ ಹವಿಸ್ಸು ಅಗ್ನಿಯ ಮೂಲಕ ಅವರಿಗೆ ತಲುಪುವುದಾದ್ದರಿಂದ, ದೇವತೆಗಳಿಗೆ ಅಗ್ನಿಮುಖರೆಂದು ಹೆಸರು. "ಅಗ್ನಿಮುಖಾ ವೈ ದೇವಾಃ". ಆದ್ದರಿಂದಲೇ ಅಗ್ನಿಗೆ ದೇವತೆಗಳ ಮುಖ, ಬಾಯಿ ಎಂಬ ಪ್ರಸಿದ್ಧಿಯಿರುವುದು. ನೃಪೇ ಸದ್ಗುಣೈಃ=ನೃಪೇ ಸ್ಥಿತೈಃ ಸದ್ಗುಣೈಃ—ಈ ರೀತಿಯ ಅರ್ಥದಲ್ಲಿ ಸಪ್ತಮೀ ವಿಭಕ್ತಿಯನ್ನು ಭಾಸ ಹಲವೆಡೆ ಬಳಸಿಕೊಂಡಿದ್ದಾನೆ.—ಪಂಚರಾತ್ರದಲ್ಲೇ, ಪೃಥಿವ್ಯಾಂ ರಾಜಾನಃ ಸರ್ವೇ ಪ್ರಾಪ್ತಾಃ II ೬೮; ಏಕಸ್ಮಿನ್ ಪಿತರಿ ಗುಣಾನ್ ಅವಾಪ್ನುಹಿ ತ್ವಂ II ೨೧೪; ಮತ್ತು ಊರುಭಂಗದಲ್ಲಿ ಲಲಾಟವಿವರೇ ಸ್ವೇದಂ......... ಶ್ಲೋಕ 23. ಸದ್ಗುಣೈಃ = ಸದ್ಗುಣಕೀರ್ತನೈಃ. ದೇವಾಲಯಂ=ಸ್ವರ್ಗಂ; ದೇವತೆಗಳ ವಾಸಸ್ಥಾನವನ್ನು. ಉತ್ತರಾರ್ಧದ ಅನ್ವಯವನ್ನು ಗಮನಿಸಿ–ಸಂಪ್ರತಿ ಸರ್ವತೋ ಹೃಷ್ಟಂ, ನೃಪೇ (ಸ್ಥಿತೈಃ) ಸದ್ಗುಣೈಃ ಗರ್ಜತ್, ಇದಂ ಜಗತ್ (ಕರ್ತೃಪದ) ಸಕಲಂ ದೇವಾಲಯಂ ಲೋಕಂ (ಕರ್ಮಪದ) ತದ್ಗುಣೈಃ ಉದಾರುರೋಹ (ಕ್ರಿಯಾಪದ). ಇದು ಕರ್ತರಿ ಪ್ರಯೋಗದಲ್ಲಿದೆ. ಕರ್ಮಣಿಯಲ್ಲಿ—ಜಗತಾ ದೇವಾಲಯೋ ಲೋಕಃ (ಸ್ವರ್ಗಲೋಕಃ) ಉದಾರುರುಹೇ.

[15] ದ್ವಿಜಾತಯಃ—ದ್ವಿ ಜಾತಿಃ (ಜನ್ಮ) ಯೇಷಾಂ ತೇ, ಇಲ್ಲಿ ದ್ವಿಜ ಶಬ್ದವನ್ನು ಬ್ರಾಹ್ಮಣರು ಎಂಬ ಅರ್ಥದಲ್ಲಿ ಉಪಯೋಗಿಸಿದ್ದರೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣದವರೂ 'ದ್ವಿಜ'ರು. ನೋಡಿ—ಮಾತುರ್ಯದಗ್ರೇ ಜಾಯಂತೇ ದ್ವಿತೀಯಂ ಮೌಂಜೀಬಂಧನಾತ್। ಬ್ರಾಹ್ಮಣಕ್ಷತ್ರಿಯವಿಶಃ ತಸ್ಮಾದೇತೇ ದ್ವಿಜಾಃ ಸ್ಮೃತಾಃ॥

16 ವೇಷ್ಟನ—(ತಲೆಗೆ) ಸುತ್ತುವುದು; ರುಮಾಲು; ಪಟ್ಟೆ—ರೇಷ್ಮೆಯ ವಸ್ತ್ರ; ಶ್ರವಃ—ವಿದ್ಯೆ; ಸ್ವಾಧ್ಯಾಯ ಶೂರ್ಯೇಃ—ವೇದಾಧ್ಯಯನದಲ್ಲಿ ಪಟುವಾದ; ಅಂಚಿತ—ಬಾಗಿದ. ಶಿಷ್ಯಸ್ಕಂಧ ನಿವೇಶಿತಾಂಚಿತಕರಾಃ........|| ಅವಿಮಾರಕದ ೬ ನೇ ಅಂಕದಲ್ಲೂ ಇದೇ ರೀತಿಯ ಭಾವ;— 'ಅಥ ಮಾಂ ದೃಷ್ಟ್ವಾ....ಶಿಷ್ಯೇ ಸ ನ್ಯಸ್ತ ಕರಃ...||

17-18 ಅವಭೃಥಸ್ನಾನ—ಯಾಗವೆಲ್ಲ ಸಂಪೂರ್ಣವಾದಮೇಲೆ ಯಜಮಾನನು ಆಚರಿಸಬೇಕಾದ ಸ್ನಾನ ಮಂಗಳ. ಇದೇ ವಸಂತೋತ್ಸವ ಎಂದು ಪ್ರಸಿದ್ಧವಾದ, ಓಕಳಿ ನೀರನ್ನು ಪರಸ್ಪರ ಮೈಮೇಲೆ ಎರಚಿಕೊಂಡು ಮಾಡುವ, ಸ್ನಾನ. ಇದಾದ ನಂತರ ಯಜ್ಞಭೂಮಿಯಲ್ಲಿ ಯಾಗಕ್ಕಾಗಿ ಹಾಕಿದ್ದ ಪ್ರಾಗ್ವಂಶ ಚಪ್ಪರ ಮುಂತಾದುವುಗಳಿಗೆ ಬೆಂಕಿ ಹೊತ್ತಿಸಿಬಿಟ್ಟು ಎಲ್ಲರೂ ತಮ್ಮ ತಮ್ಮ ಊರುಗಳಿಗೆ ತೆರಳುವುದು ವಾಡಿಕೆ. ಆದರೆ ಇಲ್ಲಿ ಹುಡುಗರೆಲ್ಲ ಸೇರಿಕೊಂಡು ಅವಭೃಥಸ್ನಾನಕ್ಕೆ ಮುಂಚಿತವಾಗಿಯೇ ಅಲ್ಲಿಗೆ ಬೆಂಕಿ ಹೊತ್ತಿಸಿದಂತೆ ಭಾಸ ವರ್ಣಿಸಿದ್ದಾನೆ. ಇಲ್ಲಿಂದ ಮುಂದೆ ಈ ವಿಷ್ಕಂಭಕದ ಕೊನೆಯವರೆಗೂ ಈ ಅಗ್ನಿಯು ಸುತ್ತಲೂ ಹರಡಿ ಶಾಂತವಾಗುವುದರ ವಿಸ್ತಾರವಾದ ವರ್ಣನೆಯಿದೆ. ಪ್ರಾಯಃ ಈ ವರ್ಣನೆಯ ಉದ್ದೇಶ ಯಜ್ಞಭೂಮಿಯ ವೈಶಾಲ್ಯವನ್ನೂ ಯಜ್ಞೋಪಕರಣಗಳ ವೈವಿಧ್ಯ ಬಹುತ್ವಗಳನ್ನೂ ತನ್ಮೂಲಕ ಆ ಯಜ್ಞದ ವೈಶಿಷ್ಟ್ಯವೈಖರಿಗಳನ್ನೂ ಸೂಚಿಸುವುದೇ ಇರಬೇಕು.

19 ಚೈತ್ಯಾಗ್ನಿ—ಗಾರ್ಹಪತ್ಯ, ಆಹವನೀಯ, ದಕ್ಷಿಣ ಎಂಬ ಮೂರು ವಿಧ ಅಗ್ನಿ; ವೈದಿಕಕರ್ಮಗಳ ಅನುಷ್ಠಾನಕ್ಕಾಗಿ ವಿಹಿತವಾದ ಅಗ್ನಿ. ಇತರ ಕೆಲಸಗಳಿಗೆ ಬಳಸುವ ಅಗ್ನಿಗೆ ಲೌಕಿಕಾಗ್ನಿ ಎಂದು ಹೆಸರು. ವೈದಿಕಾಗ್ನಿಗೆ ಲೌಕಿಕಾಗ್ನಿಯ ಸಂಸರ್ಗವಾಗಕೂಡದು. ಬ್ರಾಹ್ಮಣನಿಗೆ ಶೂದ್ರನ ಸಂಸರ್ಗವೂ ಕೂಡದು. ಆದ್ದರಿಂದಲೇ ಚೈತ್ಯಾಗ್ನಿಃ...ನ ಸಹತೇ—ಎಂಬಲ್ಲಿರುವ ಉಪಮಾನದ ಔಚಿತ್ಯ. ಪ್ರಾಗ್ವಂಶ—ಪೂರ್ವಪಶ್ಚಿಮವಾಗಿ ಗಳುಗಳನ್ನು ಹಾಸಿ ಹೊದಿಸಿರುವ, ಯಜ್ಞಶಾಲೆಯಲ್ಲಿ ಹೋಮಮಾಡುವ ಸ್ಥಲದ ಮುಂಭಾಗದಲ್ಲಿರುವ ಭಾಗ; ಯಜಮಾನನ ಪತ್ನಿಯರು ಬಂಧುಗಳು ಮುಂತಾದವರಿಗಾಗಿ ಏರ್ಪಟ್ಟ (ಅಗ್ನಿಶಾಲೆಯ) ಮುಂದಿರುವ ಭಾಗ. ಧೂಮೋ ಗಜ ಇವ—ದಟ್ಟವಾಗಿ ಮೇಲೇಳುವ ಹೊಗೆಯನ್ನು ಆನೆಗೆ ಹೋಲಿಸುವುದು ವಾಡಿಕೆ. ಪೂರ್ವಮೇಘ 2 ಮತ್ತು 53ನೇ ಶ್ಲೋಕ ನೋಡಿ.

21 ಅಗ್ನಿಃ=ವೈದಿಕಾಗ್ನಿಃ. ಅಗ್ನಿಭಯಾತ್=ಲೌಕಿಕಾಗ್ನಿ (ಸಂಸರ್ಗ) ಭಯಾತ್ ಎಂದೂ ಅರ್ಥ ಮಾಡಬಹುದು. ಆಗ "ಲೌಕಿಕಾಗ್ನಿಯ ಸಂಸರ್ಗವಾಗಿ ಬಿಡುವುದೆಂಬ ಭಯದಿಂದ ಹೆದರಿದ ದ್ವಿಜರಿಂದ ಇದೋ ಈ ವೈದಿಕಾಗ್ನಿ ಹೊರಕ್ಕೆ ಒಯ್ಯಲ್ಪಡುತ್ತಿದೆ; ಚಾರಿತ್ರ್ಯದಿಂದ ಹೊರಗಾದ ಕುಲದಲ್ಲಿ (ಚರಿತ್ರಹೀನರಾದ) ಜ್ಞಾತಿಗಳ ಸಂಸರ್ಗದ ಭಯ

ದಿಂದ ಸಚ್ಚರಿತ್ರನಾದ ಬಂಧುವೊಬ್ಬನು ಹೊರಗೇ ಇಡಲ್ಪಡುವಂತೆ"—ಎಂಬುದು ಈ ಶ್ಲೋಕದ ಅನುವಾದ.

23-25 ಶಕಟೀ=ಕೈಗಾಡಿ. ತುಪ್ಪದ ಪಾತ್ರೆಗಳು, ಹಸಿ ದರ್ಭೆಯ ಕಟ್ಟುಗಳು ಮತ್ತಿತರ ಉಪಯುಕ್ತವಾದ ಪದಾರ್ಥ ಇವುಗಳನ್ನು ಕೈಗಾಡಿಯಲ್ಲಿ ಇಟ್ಟು ಊರಿಗೆ ವಾಪಸು ಕಳುಹಿಸಲು ಸಿದ್ಧಮಾಡಿದ್ದಾಗ ಹುಡುಗರ ಚೇಷ್ಟೆಯಿಂದ ಸುತ್ತ ವ್ಯಾಪಿಸಿದ ಅಗ್ನಿ ಗಾಡಿಗೂ ಹರಡಿ ಅದೂ ಹೊತ್ತಿಕೊಂಡಿತು. ಅದರ ಮೇಲೆ ಎಷ್ಟು ನೀರು ಸುರಿದರೂ ಅದು ಆರಲೇ ಇಲ್ಲ. ಆ ಗಾಡಿ ಉರಿಯುತ್ತಿರುವುದರ ವರ್ಣನೆ ಈ ೮ ಮತ್ತು ೯ನೇ ಶ್ಲೋಕಗಳಲ್ಲಿ. ಸೂರ್ಯಾಯತೇ—ಸೂರ್ಯ ಇವ ಆಚರತಿ.

27 ವಲ್ಮೀಕಂ—ವಲಂತೇ (ಪ್ರಾಣಿನಃ) ಅತ್ರ. ದಹನೇನ ಭೀತಾಃ—'ಭೀತ್ರಾರ್ಥಾನಾಂ ಭಯಹೇತುಃ' ಎಂಬ ಪಾಣಿನಿಯ ನಿಯಮದಂತೆ ದಹನಾತ್ ಭೀತಾಃ ಎಂಬುದೇ ವ್ಯಾಕರಣ ಶುದ್ಧವಾದ ರೂಪ. ಪಂಚ ಇಂದ್ರಿಯಾಣಿ—ಐದು ಜ್ಞಾನೇಂದ್ರಿಯಗಳು; ಕಿವಿ, ಚರ್ಮ, ಕಣ್ಣು, ನಾಲಿಗೆ ಮತ್ತು ಮೂಗು.

29 ಕೋಟರಸ್ಯ ಅಂತರಂ ಏವ ದೇಹಃ; ತಸ್ಮಿನ್ ತಿಷ್ಠಂತಿ ಇತಿ-ಕೋಟರಾಂತರದೇಹಸ್ಥಾಃ—ಇಲ್ಲಿರುವ ರೂಪಕಾಲಂಕಾರವೇ ಮುಂದೆ ಪ್ರಾಣಾಃ ಇವ ಎಂಬಲ್ಲಿನ ಉತ್ಪ್ರೇಕ್ಷೆಗೆ ಆಧಾರ.

34 ಇದರೊಡನೆ ಚಾಣಕ್ಯಶತಕದ ಈ ಶ್ಲೋಕವನ್ನೂ ಗಮನಿಸಿ—ಏಕೇನಾಪಿ ಕುವೃಕ್ಷೇಣ ಕೋಟರಸ್ಥೇನ ವಹ್ನಿನಾ। ದಹ್ಯತೇ ತದ್ವನಂ ಸರ್ವಂ ಕುಪುತ್ರೇಣ ಕುಲಂ ಯಥಾ ॥

36 ವಂಶ=1 ಕುಲ 2 ಬಿದಿರು. ಭಾಗಾನೀವ......—ಇದೇ ಅಭಿಪ್ರಾಯ ಸ್ವಪ್ನವಾಸವದತ್ತ I ರಲ್ಲೂ—"ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ"

38 ಪರಶುರಿವ ರುದ್ರಸ್ಯ—ರುದ್ರನ ಕೊಡಲಿಯಂತೆ. ತುದಿಯಲ್ಲಿ ಕಟ್ಟಿದ್ದ ದೊಡ್ಡ ಜೇನುಗೂಡಿನಿಂದ ಕೂಡಿದ್ದ ತಾಳೆಮರ ರುದ್ರನ (ಉದ್ದವಾದ) ಕೊಡಲಿಯಂತೆ (ಭಯಂಕರವಾಗಿ) ಇತ್ತು

41 ಸ್ರುಚ್—ಸ್ರುಕ್=ಮರದ ಸೌಟು. ಭಾಂಡ—ಹಂಡೆ; ಇಲ್ಲಿ ಮರದ ದೊಡ್ಡ ಪಾತ್ರೆ ಎಂದರ್ಥ. ಅರಣಿ—ಬೆಂಕಿಗಾಗಿ ಉಜ್ಜುವುದಕ್ಕೆ ಉಪಯೋಗಿಸುವ ಕಟ್ಟಿಗೆಗಳು. ಪರಿಚ್ಛದ—ಹೊದಿಕೆ; ಹೊದೆಯುವ ಬಟ್ಟೆ ಮುಂತಾದುದು.

45 ಅತ್ರಭವತಾ ಸರ್ವರಾಜಮಂಡಲೇನ—ಎಂದು ಅನ್ವಯಮಾಡಿಕೊಳ್ಳಬೇಕು.

47 ಸಂಭಾವಯಾಮಃ—ಗೌರವಿಸೋಣ; ಯಜ್ಞವು ನಿರ್ವಿಘ್ನವಾಗಿ, ಚೆನ್ನಾಗಿ, ನಡೆದುದರಿಂದ ನಮ್ಮ ಸಂತೋಷ ಸೂಚಿಸುವುದರ ಮೂಲಕ ದುರ್ಯೋಧನನನ್ನು ಗೌರವಿಸೋಣ. ಹೀಗೆ ತಮ್ಮ ಗೌರವವನ್ನು ದೊಡ್ಡವರಿಗೆ ಸೂಚಿಸುವುದು ಸಂಪ್ರದಾಯ.

4 ಭರ್ವಾ ಜಯತು—ಮೇಲೆ ಟಿಪ್ಪಣಿ 13 ನೋಡಿ.

50 ವಿಷ್ಕಂಭಕ—ಮುಂದೆ ನಾಟಕದ ಮೊದಲನೆಯ ಅಂಕದಲ್ಲಿ ನಿರೂಪಿತವಾಗಲಿರುವ ಕಥೆಯ ಹಿನ್ನೆಲೆಯನ್ನು ಈ ಮೂರುಜನ ಬ್ರಾಹ್ಮಣರ ಸಂಭಾಷಣಾ ರೂಪವಾದ ವಿಷ್ಕಂಭಕ ಸೂಚಿಸುತ್ತದೆ. ಈ ಮೂವರೂ ಸಂಸ್ಕೃತವನ್ನೇ ಆಡುವ ಮಧ್ಯಮ ಪಾತ್ರಗಳಾದ್ದರಿಂದ ಇದು ಶುದ್ಧ ವಿಷ್ಕಂಭಕ. ಹಿಂದಿನ ಅಂಕದಲ್ಲಿ ನಡೆದುಹೋದ ಮತ್ತು ಮುಂದಿನ ಅಂಕದಲ್ಲಿ ನಡೆಯಲಿರುವ ಕಥೆಗಳ ನಡುವಣ ಕಥಾಭಾಗವನ್ನು ಸಂಕ್ಷೇಪವಾಗಿ ಸಂಭಾಷಣೆಯ ಮೂಲಕ ಅಂಕಗಳ ಆದಿಯಲ್ಲಿ ಪ್ರದರ್ಶಿಸುವುದುಂಟು. ಈ ಸಂಭಾಷಣೆಯಲ್ಲಿ (ಸಂಸ್ಕೃತವನ್ನಾಡುವ) ಮಧ್ಯಮ ಪಾತ್ರಗಳೇ ಭಾಗವಹಿಸಿದರೆ ಅದಕ್ಕೆ ಶುದ್ಧ ವಿಷ್ಕಂಭಕವೆಂದೂ ಮಧ್ಯಮ ಪಾತ್ರಗಳ ಜತೆಯಲ್ಲಿ (ಪ್ರಾಕೃತವನ್ನಾಡುವ) ನೀಚ ಪಾತ್ರಗಳೂ ಭಾಗವಹಿಸಿದರೆ ಅವಕ್ಕೆ ಮಿಶ್ರ ವಿಷ್ಕಂಭಕವೆಂದೂ ಹೆಸರು. ಬರೀ ನೀಚಪಾತ್ರಗಳೇ ಭಾಗವಹಿಸಿದರೆ ಅದಕ್ಕೆ ಪ್ರವೇಶಕವೆನ್ನುತ್ತಾರೆ. ಇದು ಮೊದಲನೆಯ ಅಂಕದ ಆದಿಯಲ್ಲಿ ಬರುವಂತಿಲ್ಲ.

55 ದುರ್ಯೋಧನ, ಕರ್ಣ, ಶಕುನಿ ಈ ಮೂವರು ಮಾತ್ರ ಪ್ರವೇಶಿಸಿದಂತೆ ಈ ರಂಗ ಸೂಚನೆ ತಿಳಿಸಿದರೂ, ಭೀಷ್ಮಕ, ಭೂರಿಶ್ರವಸ್ ಮುಂತಾದ ರಾಜರೂ ಇವರೊಡನಿದ್ದರೆಂದು 83 ನೇ ಪ್ಯಾರಾದಿಂದ ಮುಂದಕ್ಕೆ ಬರುವ ಪ್ರಕರಣದಿಂದ ತಿಳಿದುಬರುತ್ತದೆ. ಭಾಸನ ರಂಗಸೂಚನೆಗಳ ವಿಚಾರದಲ್ಲಿ, ಪೀಠಿಕೆ ಅಡಿ ಟಿಪ್ಪಣಿ 10 ನೋಡಿ.

57 ಕೃತಶ್ರದ್ಧೋ ಹಿ ಆತ್ಮಾ—ಇದೇ ಅಭಿಪ್ರಾಯ 'ಶ್ರದ್ಧೇಯಃ ಸ್ವಜನಸ್ಯ....' ಪ್ರತಿಮಾ IV 27 ರಲ್ಲೂ. ಯದಿಹ ಕಥಯುತ್ಯೇತದನೃತಂ—ಇಲ್ಲಿ ಕಥಯಂತ್ಯೇತತ್ ಎಂಬ ಪಾಠವೇ ಮೇಲು.

58 ಗಾಂಧಾರೀಮಾತಃ ಯಸ್ಯ ಸಃ ಗಾಂಧಾರೀ ಮಾತಃ; ತಸ್ಯ ಸಂಬುದ್ಧಿಃ, ಗಾಂಧಾರೀ ಮಾತ ಎಂದಾಗಬೇಕು. ಆದರೆ ಭಾಸ ಸಂಬುದ್ಧಿಯಲ್ಲೂ ಗಾಂಧಾರೀಮಾತಃ ಎಂದೇ ಪ್ರಯೋಗಿಸಿದ್ದಾನೆ. ಇದೇ ರೀತಿ ಪ್ರತಿಮಾನಾಟಕದಲ್ಲಿ ಕೈಕೇಯೀಮಾತಃ, ಕೌಸಲ್ಯಾಮಾತಃ; ಸುಮಿತ್ರಾಮಾತಃ ಎಂದೂ, ಬಾಲಚರಿತದಲ್ಲಿ ಯಾದವೀಮಾತಃ, ಶೌರಸೇನೀಮಾತಃ ಎಂದೂ ಚಾರುದತ್ತದಲ್ಲಿ ಕಾಣೇಲೀಮಾತಃ ಎಂದೂ ಪ್ರಯೋಗಿಸಿದ್ದಾನೆ. ಮಹಾಭಾರತದಲ್ಲೂ (ಕರ್ಣಪರ್ವ 180-2) ಕುಂತೀಮಾತಃ ಎಂದು ಸಂಬುದ್ಧಿಯಲ್ಲಿ ಪ್ರಯೋಗವಿರುವುದು ಗಮನಾರ್ಹ.

60 ಗಂಗೋಪಸ್ಪರ್ಶನಾತ್....ಕುಂತಿಯು ಕರ್ಣನನ್ನು ಅವನು ಜನಿಸಿದ ಕೂಡಲೇ ಗಂಗೆಯಲ್ಲಿ ಹಾಕಿಬಿಟ್ಟಿದ್ದುದನ್ನು ಮನಸ್ಸಿನಲ್ಲಿಟ್ಟುಕೊಂಡು ಶಕುನಿ ಆಡುವ ಚುಚ್ಚು ಮಾತು. ಇದು ಕರ್ಣನ ವಿಷಯದಲ್ಲಿ ಶಕುನಿಗಿದ್ದ ತಾತ್ಸಾರವನ್ನು ಸೂಚಿಸುತ್ತದೆ. ಅಂಗ

ರಾಜಃ — ಕರ್ಣನಿಗೆ ಯಾವ ಬಗೆಯ ಆಸ್ತಿಯಾಗಲೀ ಇರಲಿಲ್ಲ. ದುರ್ಯೋಧನನೇ ಅವನಿಗೆ ಅಂಗರಾಜ್ಯವನ್ನು ಕೊಟ್ಟು ಅವನನ್ನು ಅಂಗರಾಜನನ್ನಾಗಿ ಮಾಡಿದ್ದುದು.

61 ಇಕ್ಷ್ವಾಕು...... ಅಂಬರೀಷಾಃ — ಮನುವೈವಸ್ವತನ ಮಗ ಇಕ್ಷ್ವಾಕು. ಈತನೇ ಸೂರ್ಯವಂಶದ ಮೊದಲ ರಾಜ. ಶರ್ಯಾತಿಯೂ ಮನುವೈವಸ್ವತನ ಮಗ. ಆದರೆ ಅವನು ನಹುಷನ ಮಗನೆಂದು ಲಿಂಗಪುರಾಣದಲ್ಲಿ ಹೇಳಿದೆ. ನಹುಷನ ಮಗ ಯಯಾತಿ. ಯುವನಾಶ್ವನ ಮಗ ಮಾಂಧಾತೃ ರಾಜ. ಸಗರವಂಶಜನಾದ ಶ್ರುತನ ಮಗ ನಾಭಾಗ. ವೈವಸ್ವತಮನುವಿನ ಮಕ್ಕಳಲ್ಲಿ ನೃಗನೂ ಒಬ್ಬ. ಮಾಂಧಾತೃವಿನ ಮಗ ಅಂಬರೀಷ. ಇವರೆಲ್ಲರೂ ಪರಮಧರ್ಮಿಷ್ಠರಾಗಿ ರಾಜ್ಯವಾಳಿದರು. ಶರೀರದಿಂದ ಇವರು ಅಳಿದಿದ್ದರೂ ತಮ್ಮ (ಯಾಗಾದಿ) ಧರ್ಮಕಾರ್ಯಗಳಿಂದ ಈಗಲೂ (ನಮ್ಮ ಸ್ಮೃತಿಪಥದಲ್ಲಿ) ಉಳಿದಿದ್ದಾರೆ. ಕರ್ಣಭಾರ 17 ನೋಡಿ — 'ಹತೇಷು ದೇಹೇಷು' ಗುಣಾ ಧರಂತೇ।

64-65 ಅಯಮನುಕ್ರಮಃ — ಪಿತಾಮಹನಾದ ಭೀಷ್ಮನೇ ಮೊದಲು ವಂದ್ಯನೆಂದು ಭಾವಿಸಿ ದ್ರೋಣನಾಡುವ ಮಾತು. ಅಯಮನುಕ್ರಮಃ, ಅಥ ಕಃ ಕ್ರಮಃ ಎಂಬ ಇವೇ ಮಾತುಗಳು ಭಾಸನ ಪ್ರತಿಮಾನಾಟಕದಲ್ಲೂ ಬಂದಿವೆ — ನೋಡಿ. ರಾಜಾ — ರಾಮೋ ಲಕ್ಷ್ಮಣೋ ವೈದೇಹೀ ಇತ್ಯಯಮನುಕ್ರಮಃ। ಸುಮಂತ್ರಃ — ಅಥ ಕಃ ಕ್ರಮಃ? (ಅಂಕ ೨)

67 ದೈವತಂ ಮಾನುಷೀಭೂತಂ — ವಸು (ಅಷ್ಟವಸುಗಳ ಪೈಕಿ ಒಬ್ಬ) ದೇವತೆಯ ಅವತಾರ ಭೀಷ್ಮ. ಆದರೂ ಇಲ್ಲಿ 'ದೈವತಂ' ಎಂಬ ಪದವು ಸಾಮಾನ್ಯಾರ್ಥದಲ್ಲೇ ಬಳಸಲಾಗಿರುವಂತಿದೆ. ಬೇರೆ ನಾಟಕಗಳಲ್ಲೂ ಈ ಪದದ ಪ್ರಯೋಗ ನೋಡಿ — 'ತಮಹಂ ದ್ರಷ್ಟುಮಿಚ್ಛಾಮಿ ದೈವತಂ ಪರಮಂ ಮಮ' — ಪ್ರತಿಮಾ VI 3; 'ಕಿಮೇಷ ಮಾನುಷ ಆಸೀತಃ ? ದೈವತಂ ಖಲ್ವಯಂ !' — ಮಧ್ಯಮ ವ್ಯಾಯೋಗ. 'ದ್ವೈಪಾಯನಹಲಾಯುಧಕೃಷ್ಣವಿದುರಪ್ರಮುಖಾನಾಂ ಕುರು ಯದುಕುಲದೈವತಾನಾಂ ಪ್ರತ್ಯಕ್ಷಪ್ರವೃತ್ತಂ ಗದಾಯುದ್ಧಂ' — ಊರುಭಂಗ.

69 ಭೀಷ್ಮನು ಗಂಗೆ-ಶಂತನುಗಳ ಮಗ. ಎಲ್ಲರಂತೆ ಅವನೂ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವನು. ದ್ರೋಣ ಹಾಗಲ್ಲ. ಅವನು ಅಯೋನಿಜ. ಅವನು ಹುಟ್ಟಿದ್ದು ದ್ರೋಣದಲ್ಲಿ, ಗಂಗಾತೀರದಲ್ಲಿ ಭರದ್ವಾಜ ಋಷಿಯು ಘೃತಾಚೀ ಎಂಬ ಅಪ್ಸರೆಯನ್ನು ಮೋಹಿಸಿ ರೇತಸ್ಸ್ಖಲನವಾಗಲು ಅದನ್ನು ಆ ಋಷಿಯು ದ್ರೋಣ (ಮರದ ಪಾತ್ರೆ) ದಲ್ಲಿಟ್ಟಹಾಗೂ ಅಲ್ಲಿಂದ ದ್ರೋಣ ಜನಿಸಿ ಬಂದ ಹಾಗೂ ಮಹಾಭಾರತ, ಆದಿಪರ್ವ, ಅಧ್ಯಾಯ 130ರಲ್ಲಿ ಹೇಳಿದೆ. ಅದ್ದರಿಂದಲೇ ದ್ರೋಣನನ್ನು 'ಸ್ವಯಂ ಜನಿತ' ಎಂದು ಇಲ್ಲಿ ಹೇಳಿರುವುದು. ಮಹತ್ — ಮಹತ್ತರ — ಮಹತ್ತಮ. 'ವಯಂ' — ಈ ಬಹುವಚನದಿಂದ ಭೀಷ್ಮ ತನ್ನನ್ನು ಮಾತ್ರ ನಿರ್ದೇಶಿಸಿಕೊಳ್ಳುವುದಿಲ್ಲ. ಕ್ಷತ್ರಿಯ ವಂಶಜರೆಲ್ಲಾ ದ್ರೋಣನ ಶಿಷ್ಯಮಹತ್ತರರೇ !

77 ಆಪ್ತದಕ್ಷಿಣಾನ್—ಆಪ್ತೇಭ್ಯಃ ದಕ್ಷಿಣಾ ಯೇಷು, ತಾನ್. ಯುಧಿಷ್ಠಿರನು ರಾಜಸೂಯಯಾಗವನ್ನು ಈ ಹಿಂದೆಯೇ ಮಾಡಿಬಿಟ್ಟಿದ್ದುದರಿಂದ ದುರ್ಯೋಧನನೂ ಅದೇ ಯಾಗವನ್ನು ಮಾಡಬೇಕೆಂಬುದೇ ಅವನ ಪಕ್ಷದವರೆಲ್ಲರ ಆಸೆ. ಜರಾಸಂಧಃ ಇವ—ಜರಾಸಂಧನು ಹೇಗೆ ರಾಜರನ್ನೆಲ್ಲ ಸೋಲಿಸಿ ತನ್ನ ರಾಜಧಾನಿಗೆ ಕರೆತಂದಿದ್ದನೋ ಹಾಗೆ. [ಬೃಹದ್ರಥನ ಮಗ ಜರಾಸಂಧ. ಇವನು ಎರಡು (ಶರೀರದ) ಹೋಳಾಗಿ ಹುಟ್ಟಿದ. ಜರಾ ಎಂಬ ರಾಕ್ಷಸಿ ಈ ಹೋಳುಗಳನ್ನು ಒಟ್ಟುಗೂಡಿಸಿದುದರಿಂದ ಈತ ಜರಾಸಂಧನಾದ. ಈತನೇ ಕಂಸನ ಮಾವ, ಮಗಧರಾಜ. ಈತ ಅನೇಕ ರಾಜರನ್ನು ಜಯಿಸಿ ಅವರನ್ನು ತನ್ನ ರಾಜಧಾನಿಯಲ್ಲಿ ಸೆರೆಯಿಟ್ಟಿದ್ದನು. ಕಂಸನು ಕೃಷ್ಣನಿಂದ ಹತನಾದನೆಂದು ಕೇಳಿದಮೇಲೆ, ದೊಡ್ಡ ಸೇನೆಯೊಡನೆ ಮಧುರೆಗೆ 18 ಬಾರಿ ವ್ಯರ್ಥವಾಗಿ ಮುತ್ತಿಗೆ ಹಾಕಿದನು. ಯುಧಿಷ್ಠಿರನ ರಾಜಸೂಯದ ಕಾಲದಲ್ಲಿ ಕೃಷ್ಣ, ಅರ್ಜುನ, ಭೀಮ ಈ ಮೂವರೂ ಬ್ರಾಹ್ಮಣ ವೇಷ ಧರಿಸಿ ಜರಾಸಂಧನಲ್ಲಿ ಬಂದಿಗಳಾಗಿದ್ದ ರಾಜರನ್ನು ಬಿಡಿಸಲು ಹೋದರು. ಜರಾಸಂಧ ರಾಜರನ್ನು ಬಿಡುಗಡೆ ಮಾಡಲು ಒಪ್ಪದೆ ಹೋದುದರಿಂದ, ಭೀಮನಿಗೂ ಅವನಿಗೂ ದ್ವಂದ್ವಯುದ್ಧ ನಡೆದು ಜರಾಸಂಧ ಹತನಾದ.] ಮುಂದೆ I [39] ರಲ್ಲೂ II [57] ರಲ್ಲೂ ಜರಾಸಂಧನ ಪ್ರಸ್ತಾಪವಿದೆ.

78 ಆಶೀರ್ವಾದ ಮಾಡುವಾಗ ಶಾಂತಿ ಸಮಾಧಾನಗಳ ಪ್ರಸ್ತಾಪ ಮಾಡುವುದು ಸಂಪ್ರದಾಯ. ಯುದ್ಧೋತ್ತೇಜಕಗಳಾದ ಮಾತುಗಳನ್ನು ಆಡುವುದು ನಿಷಿದ್ಧ. ಹಾಗಿದ್ದರೂ ಶಕುನಿ ಇಲ್ಲಿ 'ಯುದ್ಧೋದ್ಯೋಗ'ವನ್ನೇ ಉಂಟುಮಾಡುತ್ತಿದ್ದಾನೆ. ಇದೇ ಅರ್ಥದಲ್ಲಿ 'ಉದ್ಯೋಗ' ಶಬ್ದ ಮುಂದೆ II [47] ಮತ್ತು II [53] ರಲ್ಲೂ ಪ್ರತಿಮಾನಾಟಕ I ರಲ್ಲೂ (ಅಸ್ಮದ್ರಾಜ್ಯಭ್ರಂಶಃ ಭವತಃ ಉದ್ಯೋಗಂ ಜನಯತಿ) ಬರುತ್ತದೆ.

81 ರಾಜರ್ಷಿಧೀರಾತ್ ವಚನಾತ್—(I [31] ರಲ್ಲಿ) ದುರ್ಯೋಧನನಾಡಿದ ರಾಜರ್ಷಿಯೋಗ್ಯವಾದ ಧೀರೋದಾತ್ತವಚನದಿಂದ.

87 ವಾಸುಭದ್ರಃ-ಕೃಷ್ಣಃ. ಜಗತ್ಯಾಂ ಸರ್ವಹೃದಯೇ ವಸತಿ ಇತಿ ವಾಸುಃ—ಕ್ಷೀರಸ್ವಾಮಿ. ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇತಿ ವೈ ಯತಃ । ತತೋಽಸೌ ವಾಸುದೇವೇತಿ ವಿದ್ವದ್ಭಿಃ ಪರಿಗೀಯತೇ ॥—ವಿಷ್ಣುಪುರಾಣ. ವಸುದೇವ=ವಸುಭದ್ರ; ದೇವ, ಭದ್ರ ಎಂಬುವು ಒಂದು ಹೆಸರಿನ ಘನತೆಯನ್ನು ತೋರಿಸತಕ್ಕವು. ಅಂತೆಯೇ ರಾಮಭದ್ರ. ವಸುಭದ್ರಸ್ಯ ಅಪತ್ಯಂ ಪುಮಾನ್—ವಾಸುಭದ್ರಃ. ಮುಂದೆ II [45] ರಲ್ಲೂ ದೂತವಾಕ್ಯ 6ನೇ ಶ್ಲೋಕದಲ್ಲೂ ಕೃಷ್ಣನನ್ನು ವಾಸುಭದ್ರ ಎಂದು ಭಾಸ ಕರೆದಿದ್ದಾನೆ. [ಮಹಾಭಾರತದ ಕಥೆಯ ಪ್ರಕಾರ ಗೋಗ್ರಹಣ ಯುದ್ಧದಲ್ಲಿ ಅಭಿಮನ್ಯು ಭಾಗವಹಿಸುವುದಿಲ್ಲ. ಉತ್ತರೆಯನ್ನು ಅವನಿಗೆ ಕೊಟ್ಟು ವಿವಾಹ ಮಾಡುವ ಪ್ರಸ್ತಾಪ ಬಂದಮೇಲೆ

ಅವನನ್ನು ಮತ್ಸ್ಯಪುರಕ್ಕೆ ಕರೆಸಿಕೊಳ್ಳುತ್ತಾರೆ. ಆದರೆ ಈ ನಾಟಕದಲ್ಲಿ ಸ್ವಾರಸ್ಯಮಯವಾದ ನಾಟಕೀಯ ಸನ್ನಿವೇಶವೊಂದರ ಕಲ್ಪನೆಯನ್ನು ಸಾಧಿಸುವುದಕ್ಕಾಗಿ ದುರ್ಯೋಧನನ ಯಜ್ಞಕ್ಕೇ ಕೃಷ್ಣನ ಪ್ರತಿನಿಧಿಯಾಗಿ ಅಭಿಮನ್ಯು ಬಂದಂತೆ ಹೇಳಿ, ಮೊದಲೇ ಕೌರವ ಪಕ್ಷದಲ್ಲಿ ಅವನಿಗೊಂದು ಸ್ಥಾನ ಕಲ್ಪಿಸಿದ್ದಾನೆ ಭಾಸ ]

[90] ಪಿತೃಸದೃಶಪರಾಕ್ರಮೋ ಭವ—ಇದೇ ಆಶೀರ್ವಾದ ಮುಂದೆ II [263] ರಲ್ಲೂ. ಮಧ್ಯಮ ವ್ಯಾಯೋಗದಲ್ಲಿ, ವೃದ್ಧಃ—ಪಿತೃಸದೃಶಗುಣಕೀರ್ತಿರ್ಭವ, ಎಂದಿದೆ.

[91] ಏತತ್ಸರ್ವರಾಜಮಂಡಲಂ......—ಇವರು ರಂಗಮಂಚದ ಮೇಲೆ ಬಂದ ಸೂಚನೆ ಹಿಂದೆ ಬಂದೇ ಇಲ್ಲ. ಪೀಠಿಕೆ, ಅಡಿಟಪ್ಪಣಿ 10 ನೋಡಿ.

[95] ವ್ಯಪಶ್ರಯಿಷ್ಯೇ—ಯಾಚಿಸಿ ತೆಗೆದುಕೊಳ್ಳುವೆನು. (ವಿ+ಅಪ+) ಶ್ರೀ ಎಂಬ ಧಾತುವನ್ನು ಭಾಸ 'ಯಾಚಿಸಿ ತೆಗೆದುಕೊಳ್ಳುವುದು' ಎಂಬ ಅರ್ಥದಲ್ಲೇ ಬೇರೆ ಕಡೆಯೂ ಪ್ರಯೋಗಿಸಿದ್ದಾನೆ. ನೋಡಿ—ಸ್ವಪ್ನ I ರಲ್ಲಿ—ಕಾಂಚುಕೀಯಃ—ಭವತಿ, ಮಹತೀ ಖಲ್ವಸ್ಯ ವ್ಯಪಾಶ್ರಯಣಾ. ಕಥಂ ಪ್ರತಿಜಾನೀಮಃ ? ಮತ್ತು ಮಧ್ಯಮ ವ್ಯಾಯೋಗದಲ್ಲಿ—ವೃದ್ಧಃ—...ಭವತು ಪುತ್ರ, ವ್ಯಪಶ್ರಯಿಷ್ಯೇ ತಾವದೇನಂ.

[105] ಅಪಸ್ತಾವತ್—ರಂಗಮಂಚದ ಮೇಲಕ್ಕೇ ನೀರನ್ನು ತರಿಸಿಕೊಳ್ಳುವುದು, ಆಚಮನಾದಿ ಮಾಡುವುದು ಪ್ರಾಯಃ ಭಾಸನ ಎಲ್ಲ ನಾಟಕಗಳಲ್ಲೂ ಬರುತ್ತದೆ.

[111] ಮಮ ಕಾರ್ಯಕ್ರಿಯಾ ಏವ—ಇಲ್ಲಿ ಮಮ ಎಂಬುದಕ್ಕೆ ಕಾರ್ಯಕ್ರಿಯಾ ಎಂಬ ಸಮಸ್ತಪದದ 'ಕಾರ್ಯ'ದೊಡನೆ ಮಾತ್ರ (ಏಕದೇಶ) ಅನ್ವಯ. ಮುಖೋದಕಂ—ಸ್ವಪ್ನ IV ರಲ್ಲೂ ಎರಡು ಬಾರಿ ಬರುತ್ತದೆ.

[113] ಕರಣಂ=ಸಾಧನ; ಪ್ರಮಾಣ; ದಸ್ತಾವೇಜು; ಪತ್ರ. ಮನು VIII [51, 52] ಮತ್ತು [151] ನೋಡಿ.

[114] ಸಂವತ್ಸರೈಃ ದ್ವಾದಶಭಿಃ ನ ದೃಷ್ಟಾಃ—ಈ ವೇಳೆಗೆ ಪಾಂಡವರು ವನಕ್ಕೆ ತೆರಳಿ 13 ವರ್ಷಗಳಾಗಿತ್ತು. ಪಾಂಡವರು 12 ವರ್ಷ ವನವಾಸ ಮುಗಿಸಿ ಒಂದು ವರ್ಷದ ಅಜ್ಞಾತವಾಸವನ್ನೂ ಇನ್ನೇನು ಕಳೆದಿದ್ದರು. ಆದರೂ ಈ ನಾಟಕದಲ್ಲಿ ಪುನಃ ಪುನಃ ಹನ್ನೆರಡು ವರ್ಷ ಎಂದೇ ಹೇಳಲಾಗುತ್ತಿದೆ; I [33, 46]; II [63, 69] ನೋಡಿ. ಮಹಾಭಾರತದ ರೀತ್ಯಾ ಪಾಂಡವರ ವನವಾಸ ಕಾಲದಲ್ಲಿ ಅವರಿರುತ್ತಿದ್ದ ಜಾಗ ಕೌರವರಿಗೆ ತಿಳಿದಿತ್ತೆಂಬುದು ಘೋಷಯಾತ್ರೆಯೇ ಮುಂತಾದ ಸನ್ನಿವೇಶಗಳಿಂದ ಸಿದ್ಧವಾಗುತ್ತದೆ.

[118] ಯಾಚಿತೈಃ=ಯಾಚನಾಭಿಃ. ಕಿಂ ವರಂ (—ಯಾವುದು ವಾಸಿ ?) ಯಾಚಿತೈಃ ದತ್ತಂ, (ಉತ=ಅಥವಾ) ತೈಃ ಬಲಾತ್ಕಾರೇಣ ಹೃತಂ ?

[119] ಸರ್ವೇ—ದ್ರೋಣ ಭೀಷ್ಮರನ್ನು ಬಿಟ್ಟು ಉಳಿದ ಎಲ್ಲರೂ.

123 ಮಿತ್ರಮುಖ—ಹೊರನೋಟಕ್ಕೆ ಸ್ನೇಹಿತನಾಗಿ ಕಾಣುವವ; ಶಕುನಿಗೆ ವಿಶೇಷಣ.

124 ಮಾನೇ ಚ ಧರ್ಷಿತಾಃ—ನೆರೆದ ಸಭೆಯಲ್ಲಿ ದ್ರೌಪದಿಯ ವಸ್ತ್ರಾಪಹರಣವಾಗಿ ಪಾಂಡವರು ಪರಿಭವಕ್ಕೀಡಾದ ಪ್ರಕರಣ.

125 ಅತ್ರ...ದ್ಯೂತಾದ್ಯತವೃತ್ತಿಃ ಯುಧಿಷ್ಠಿರಃ ಪ್ರಷ್ಟವ್ಯಃ—ಈ ಬಗ್ಗೆ ಪ್ರಶ್ನಿಸಲ್ಪಡಬೇಕಾದವನು ಯುಧಿಷ್ಠಿರ. ಇವೇ ರೀತಿಯ ಮಾತು ಪ್ರತಿಮಾ ನಾಟಕ III ರಲ್ಲೂ (ಕೈಕೇಯಿಾ—ಜಾತ, ಶುಲ್ಕಲುಬ್ಧಾ ನನು ಪ್ರಷ್ಟವ್ಯಾ?)

126 ಯೇನ— ಯಾವ ಯುಧಿಷ್ಠಿರನಿಂದ. ಯೇನ ಭೀಮಃ ಸಭಾಸ್ತಂಭಂ...—ದ್ರೌಪದಿಯ ವಸ್ತ್ರಾಪಹರಣದ ಕಾಲದಲ್ಲಿ ಭೀಮನು ಕೋಪದಿಂದ ಆ ಸಭೆಯ ಕಂಭವೊಂದನ್ನು ಕಿತ್ತು ಕೈಗೆತ್ತಿಕೊಳ್ಳುವುದರಲ್ಲಿದ್ದ. ಆಗ ಯುಧಿಷ್ಠಿರ ಅವನನ್ನು ತಡೆದ. ಇಲ್ಲದಿದ್ದರೆ ಆಗಲೇ ಆ ಸಭಾಸ್ತಂಭದಿಂದ ಭೀಮನು ಶಕುನಿಯನ್ನು ಸಂಹರಿಸಿಬಿಡುತ್ತಿದ್ದ. ಶಕುನಿಯೂ ಈಗ ನಮ್ಮನ್ನು ಆಕ್ಷೇಪಿಸಲು ಇಲ್ಲಿ ಇರುತ್ತಿರಲಿಲ್ಲ.

128 ಕದರ್ಥನ—ಕೀಳುಮಟ್ಟದ ಯಾಚನೆ.

130 ಜ್ಯೇಷ್ಠೋ ಭವಾನ್—ಕೌರವ ಪಾಂಡವರಲ್ಲಿ ದುರ್ಯೋಧನನನ್ನು ಸರ್ವಜ್ಯೇಷ್ಠನೆಂದು ಇಲ್ಲಿ ಹೇಳಿದೆ. ಮಹಾಭಾರತದ ಆದಿಪರ್ವದ ಪ್ರಕಾರ ಯುಧಿಷ್ಠಿರನೇ ಸರ್ವಜ್ಯೇಷ್ಠ. ಅವನ ಬಳಿಕ ಭೀಮ ದುರ್ಯೋಧನರು ಒಂದೇ ದಿವಸ ಹುಟ್ಟಿದರು—"ಯಸ್ಮಿನ್ನಹನಿ ಭೀಮಸ್ತು ಜಜ್ಞೇ ಭಾರತಸತ್ತಮ। ದುರ್ಯೋಧನೋಽಪಿ ತತ್ರೈವ ಪ್ರಜಜ್ಞೇ ವಸುಧಾಧಿಪ ॥" ತೇ=ತವ, ನಿನ್ನ. ಪ್ರಣಯಿನಃ (ತಾನ್)—ದ್ವಿತೀಯಾ ಬಹುವಚನ. ಜ್ಯೇಷ್ಠೋ ಭವಾನ್–ಇದು ಪ್ರತ್ಯೇಕವಾಕ್ಯ. ತ್ವಯಿ ಪ್ರಣಯಿನಃ ತಾನ್ ತೇ ಕುಟುಂಬೇ (ತ್ವಂ) ಧಾರಯಿಷ್ಯಸಿ? (ಅಥವಾ) ಮೃಗೈಃ ಸಹ (ತೇ) ವರ್ತಯಂತು? ಇದು ಶ್ಲೋಕದ ಕೊನೆಯ ಭಾಗದ ಅನ್ವಯ. ಇಲ್ಲಿ ತ್ವಂ, ತೇ ಎಂಬ ಎರಡು ಕರ್ತೃಪದಗಳ ಅಧ್ಯಾಹಾರ ಮಾಡಿಕೊಳ್ಳಬೇಕು.

131 ವರ್ತಯಂತು, ವರ್ತಯಂತು—ಶಕುನಿಯು ತನ್ನ ಅಸಮ್ಮತಿಯನ್ನು ಸೂಚಿಸುವ ವಿಧಾನ ಇದು. ಮುಂದೆ III 67ರಲ್ಲಿ ಅವನು 'ತತ್ರೈವ, ತತ್ರೈವ' ಎಂದು ಹೇಳುವುದರ ಅಭಿಪ್ರಾಯವೂ ಇದೇ ರೀತಿಯದು.

133 ವರಪುರುಷವಿಶೇಷಂ—ಇಲ್ಲಿ ಇದು ಪಾಂಡವರಿಗೆ ಅನ್ವಯಿಸುತ್ತದೆ.

135 ಯದಿ ವಾ=ಅಥವಾ. (ಮಹಾಕುಲಾನಾಂ) ಭೇದಃ=ವೈಮನಸ್ಯ. ಮುಂದೆ ಮಮ ಹಿ ಪಿತೃಭಿರಸ್ಯ ಪ್ರಸ್ತುತೋ ಜ್ಞಾತಿಭೇದಃ. III 4ರಲ್ಲೂ ಭೇದಃ ಎಂಬುದಕ್ಕೆ ಇದೇ ಅರ್ಥ. ಧರ್ಮಾಧಿಕಾರವಚನೇಷು—ಇಲ್ಲಿ ಕರಣಾರ್ಥದಲ್ಲಿ ಸಪ್ತಮೀ ವಿಭಕ್ತಿ ಪ್ರಯೋಗಿಸಲ್ಪಟ್ಟಿದೆ.

148 ವಟು(ಚಾಪಲಂ)—ಮುದುಕನ (ದುಡುಕು ಮಾತು). 'ವಟು' ಶಬ್ದವು ಇಂತಹ ಸಂದರ್ಭಗಳಲ್ಲಿ ನಿಕೃಷ್ಟತೆಯನ್ನು ಸೂಚಿಸಲು ಬಳಸಲ್ಪಡುತ್ತದೆ. ಮುದ್ರಾರಾಕ್ಷಸ, ಅಂಕ ೪ ನೋಡಿ—ಅಪಿ ದುರಾತ್ಮಾ ಚಾಣಕ್ಯವಟುಃ ಅತಿಸಂಧಾತುಂ ಶಕ್ಯಃಸ್ಯಾತ್.

154 ಯದಿ ದಾತವ್ಯೇ ರಾಜ್ಯೇ—'ಯದಿ' ಎಂಬುದರೊಡನೆ 'ದಾತವ್ಯೇ ರಾಜ್ಯೇ' ಎಂಬ ಸತಿಸಪ್ತಮಿಾ ಪ್ರಯೋಗ ಆರ್ಷ.

157 ಸುಭ್ರಾತೃತಾ—ಶೋಭನಾ ಭ್ರಾತೃತಾ. ಪ್ರತಿಮಾ, ಅಭಿಷೇಕ ನಾಟಕಗಳಲ್ಲಿ ಭಾಸನು 'ಸೌಭ್ರಾತ್ರ' ಎಂದೇ ಪ್ರಯೋಗಿಸಿದ್ದಾನೆ.

158 ಬಲವತ್ಪ್ರತ್ಯಮಿತ್ರಃ—ಬಲವಂತಃ ಪ್ರತ್ಯಮಿತ್ರಾಃ (=ಶತ್ರವಃ) ಯಸ್ಮಿನ್ ಸಃ। 'ಕುದೇಶಃ' ಎಂಬುದರ ವಿಶೇಷಣ.

162 ಅಪನಯೋ ವಾ ವಂಚನಾ ವಾ ಯಥಾ ವಾ ಭವತು—ಅನ್ಯಾಯವೋ, ವಂಚನೆಯೋ, ಅಥವಾ ಇನ್ನೇನೋ—ಹೇಗಾದರೂ ಆಗಲಿ.

163-4 ಜನ ತನ್ನನ್ನು 'ಸುಳ್ಳಾಡಿದವ' ಅನ್ನಬಾರದು, ಎಂಬುವೇ ದುರ್ಯೋಧನನ ಉದ್ದೇಶ.

167 ಸಮಾನಯತು ಭವಾನ್ ಇದಾನೀಂ—ಇಲ್ಲಿ ಕರ್ಮಪದ 'ಪಾಂಡವಾನಾಂ ಪ್ರವೃತ್ತಿಂ' ಎಂಬುದು ಅಧ್ಯಾಹಾರ್ಯ. 'ಪಾಂಡವಾನ್' ಎಂಬುದೂ ಕರ್ಮಪದವಾಗಬಹುದು. ಈ ಮಾತಿಗೆ ಉತ್ತರವಾಗಿ ಮುಂದೆ ಶ್ಲೋ 48 ರಲ್ಲಿ ನೋಡಿ—'ತೇ (ಪಾಂಡವಾಃ) ಮಯಾ ಉಪನೇಯಾಃ' ಎಂದಿದೆ. ಹಾಗೆಯೇ I[174] ರಲ್ಲಿ 'ತತ್ಕುತೋ ನು ಖಲು ಪಾಂಡವಾನಾಂ ಪ್ರವೃತ್ತಿಃ ಉಪನೇತವ್ಯಾ' ಎಂದೂ ಇದೆ. ಪ್ರವೃತ್ತಿಃ—ಸಮಾಚಾರ. ವಾರ್ತಾ ಪ್ರವೃತ್ತಿಃ ವೃತ್ತಾಂತಃ—ಅಮರ.

169 ಛಲನಂ—ಮೋಸ. ಇದೇ ಅರ್ಥದಲ್ಲಿ 'ಛಲ' ಎಂಬ ಶಬ್ದದ ಪ್ರಯೋಗಕ್ಕೆ I 170 ಅಚ್ಛಲೋ ಧರ್ಮಃ; ಮತ್ತು ಅವಿಮಾರಕ IV ರಲ್ಲಿ 'ಅಚ್ಛಲಂ ಮಿತ್ರತ್ವಂ ನಾಮ; V ರಲ್ಲಿ ಅಚ್ಛಲಃ ಸ್ನೇಹೋ ನಾಮ—ಇತ್ಯಾದಿಗಳನ್ನು ನೋಡಿ.

173 ಸೀತೆಯ ಸುಳಿವೇ ತಿಳಿಯದಿದ್ದಾಗ ಹನುಮಂತನು ಹೇಗೋ ಕಷ್ಟಪಟ್ಟು ಲಂಕೆಯಲ್ಲಿ ಆಕೆಯನ್ನು ಪತ್ತೆಮಾಡಿ, ಕಂಡು, ರಾಮನಿಗೆ ವಿವರ ತಿಳಿಸಿದಂತೆ, ದ್ರೋಣನು ತಾನೂ ಪಾಂಡವರ ಸುಳಿವನ್ನು ಹೇಗಾದರೂ ತಿಳಿಯುವಂತಾಗಿ ತನ್ನ ಕಾರ್ಯಸಿದ್ಧಿಯಾಗಲೆಂದು ಆಶಿಸುತ್ತಾನೆ.—

174 ತತ್ ಕುತೋ ನು ಖಲು ಪಾಂಡವಾನಾಂ ಪ್ರವೃತ್ತಿರುಪನೇತವ್ಯಾ?—ದ್ರೋಣ ತನ್ನಷ್ಟಕ್ಕೆ ತಾನೇ ಈ ಪ್ರಶ್ನೆ ಹಾಕಿಕೊಳ್ಳುವುದಕ್ಕೆ ಸರಿಯಾಗಿ ಭಟನು ಬಂದು ಈ ಪ್ರಶ್ನೆಗೆ ಉತ್ತರವೋ ಎಂಬಂತೆ 'ವಿರಾಟನಗರಾತ್' ಎಂದಾರಂಭಿಸಿ 'ದೂತಃ ಪ್ರಾಪ್ತಃ' ಅನ್ನುತ್ತಾನೆ. ದ್ರೋಣನ ಆತ್ಮಗತವಾದ ಆ ಪ್ರಶ್ನೆಗೆ 'ವಿರಾಟನಗರಾತ್' ಎಂಬುದೇ

ಸರಿಯಾದ ಉತ್ತರವೆಂಬುದೂ ಮುಂದೆ ಸ್ಪಷ್ಟಪಡುತ್ತದೆ. ದ್ರೋಣನಿಗಾಗಲಿ ಭಟನಿಗಾಗಲಿ ಇದರ ಅರಿವಿರುವುದೇ ಇಲ್ಲ. ಇಂತಹ ನಾಟಕೀಯವಾದ ಸನ್ನಿವೇಶಕ್ಕೆ 'ಪತಾಕಾಸ್ಥಾನ'ವೆಂದು ಹೆಸರು. ಇವು ಭಾಸನ ನಾಟಕಗಳಲ್ಲಿ ವಿಶೇಷವಾಗಿ ಬರುತ್ತವೆ. ಅಭಿಷೇಕ v, ಅವಿಮಾರಕ iii, ಪ್ರತಿಜ್ಞಾ ii, ಪ್ರತಿಮಾ i, ಸ್ವಪ್ನ ನಾ. ನೋಡಿ. ಈ ಕಾರಣದಿಂದಲೇ ಬಾಣನು 'ಸಪತಾಕೈರ್ಯಶೋ ಲೇಭೇ ಭಾಸಃ' ಎಂದು ಹೇಳಿರುವುದು. 'ಯತ್ರಾರ್ಥೇ ಚಿಂತಿತೇऽನ್ಯಸ್ಮಿನ್ ತಲ್ಲಿಂಗೋऽನ್ಯಃ ಪ್ರಯುಜ್ಯತೇ। ಆಗಂತುಕೇನ ಭಾವೇನ ಪತಾಕಾಸ್ಥಾನಕಂ ತು ತತ್' ಎಂಬುದು ಸಾಹಿತ್ಯದರ್ಪಣದಲ್ಲಿ ಹೇಳಿರುವ ಪತಾಕಾಸ್ಥಾನದ ಲಕ್ಷಣ. ಪತಾಕಾಸ್ಥಾನಕ್ಕೆ 'ಗಂಡ' ಎಂದೂ ಹೆಸರಿದೆ. ಅದರ ಲಕ್ಷಣ 'ಗಂಡಃ ಪ್ರಸ್ತುತಸಂಬಂಧಿ ಭಿನ್ನಾರ್ಥಂ ಪ್ರಸ್ತುತಂ ವಚಃ।

183 ಬಾಹುಭ್ಯಾಮೇವ ಹಿಂಸಿತಂ_ಎಂಬುದರ ವಿವರಣೆಯೇ ಉತ್ತರಾರ್ಧದ ಅಶಸ್ತ್ರಜನಿತೋ ವಧಃ ಎಂಬಲ್ಲಿ.

187 ಅಸ್ಮಿನ್ ಭ್ರಾತೃಶತೇ—ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿ ನೂರು ಜನ ಭ್ರಾತೃಗಳಲ್ಲಿ. ಕೀಚಕರೂ ನೂರುಜನ ಸೋದರರು. ಆದ್ದರಿಂದಲೇ 'ಅಸ್ಮಿನ್ ಭ್ರಾತೃಶತೇ ಭೀಮಸೇನಸ್ಯ ಯಃ ರೋಷಃ (ಆಸೀತ್) ಸಃ ತಸ್ಮಿನ್ (ಕೀಚಕಾನಾಂ) ಶತೇ ಫಲಿತಃ' ಎಂದು ಹೇಳಿರುವುದು.

188 ಇದಕ್ಕೆ 'ಅತ್ರ ಪಾಂಡವಾ ಇತಿ ಕಥಂ ಭವಾನ್ ಜಾನಾತಿ' ಎಂಬ ಪಾಠಾಂತರವಿದೆ.

189 ಪಂಡಾ 'ಧೀಃ' (ಜಾತಾ) ಯಸ್ಯ ಸಃ_ಪಂಡಿತಃ. ಈ ಶ್ಲೋಕದ ಕೊನೆಯಲ್ಲೂ ಮುಂದಿನ ವಾಕ್ಯದ ಆದಿಯಲ್ಲೂ ಬರುವ ಗೋವೃಷಾಃ ಎಂಬ ಪದ ಉತ್ತರತ್ರ ನಡೆಯುವ ಗೋಗ್ರಹಣವನ್ನು ಸೂಚಿಸುತ್ತದೆ.

190 ಹನ್ತ ಸಿದ್ಧಂ ಕಾರ್ಯಂ!—ಹಿಂದೆ I 143 ರಲ್ಲಿನ 'ಹನ್ತ ವಿಪನ್ನಂ ಕಾರ್ಯಂ'! ಎಂಬುದರ ಟಿಪ್ಪಣಿ ನೋಡಿ.

195 ಕಾಲೇ = ಕಾಲೇ ಪ್ರಾಪ್ತೇ. ಪ್ರತಿಜ್ಞಾ III ಮತ್ತು ಬಾಲಚರಿತ II ರಲ್ಲೂ ಇದೇ ಅರ್ಥದಲ್ಲೇ ಈ ಪದ ಪ್ರಯೋಗಿಸಲ್ಪಟ್ಟಿದೆ.

198 ಅಥ = ಮತ್ತು. ಈ ಅರ್ಥದಲ್ಲಿ 'ಅಥ' ಶಬ್ದದ ಪ್ರಯೋಗಕ್ಕೆ ಮೃಚ್ಛಕಟಿಕ I 4 ನೋಡಿ.

211-218 ಇಲ್ಲಿ ಶಕುನಿಯ ರಥವೇ ಮುಂದಾಗಬೇಕೆಂದು ದ್ರೋಣ ಹೇಳುತ್ತಾನೆ; ಶಕುನಿಯೂ ಅದಕ್ಕೆ ಒಪ್ಪುತ್ತಾನೆ. ಆದರೆ, ಇವಕ್ಕೆ ಮೊದಲು ಶಕುನಿಯು ಗೋಗ್ರಹಣಕ್ಕೆ ತೆರಳಲು ತನ್ನ ಆನೆಯನ್ನು ತರಬೇಕೆಂದು ಹೇಳಿದ್ದಾನೆ; ರಥವನ್ನಲ್ಲ, ಎಂಬುದನ್ನು ಗಮನಿಸಿ.

## ಅಂಕ ೨

ಈ ಅಂಕವು ಪ್ರವೇಶಕದಿಂದ ಆರಂಭವಾಗುತ್ತದೆ. ಪ್ರಾಕೃತದಲ್ಲಿ ಮಾತಾಡುವ ಗೋಪಾಲಕರು ಈ ಪ್ರವೇಶಕದಲ್ಲಿ ಭಾಗವಹಿಸುವ ಪಾತ್ರಗಳು. ಈ ದೃಶ್ಯಕ್ಕೂ ಬಾಲ ಚರಿತದ ಮೂರನೆಯ ಅಂಕದ ಆದಿಯಲ್ಲಿ ಬರುವ ದೃಶ್ಯಕ್ಕೂ ತುಂಬ ಸಾಮ್ಯವಿದೆ. ಇಲ್ಲಿನ ಕೆಲವು ಹೆಸರುಗಳೂ ವಾಕ್ಯಗಳೂ ಯಥಾವತ್ತಾಗಿ ಮೇಲೆ ಹೇಳಿದ ಬಾಲಚರಿತದ ಭಾಗದಲ್ಲಿ ಬಳಸಲ್ಪಟ್ಟಿವೆ.

೩ ಅಹೀನವತ್ಸಾಃ—ನ ಹೀನಾಃ (ಕ್ಷೀಣಾಃ ನಷ್ಟಾಃ ವಾ) ವತ್ಸಾಃ ಯಾಸಾಂ; ದೀರ್ಘಾಯುಗಳಾದ ಅನೇಕ ಕರುಗಳುಳ್ಳವುಗಳು.

ಅವಿಧವಾಃ—ವಿಧವೆಯರಲ್ಲದವರು; ಅಂದರೆ ಕನ್ಯೆಯರು ಮತ್ತು ಸುಮಂಗಲಿಯರು.

ಅಸ್ಮಾಕಂ ರಾಜಾ ಏಕಚ್ಛತ್ರಪೃಥಿವೀಪತಿರ್ಭವತು—ಈ ಬಗೆಯಾಗಿ ರಾಜಕೀಯ ಪರಮಾಧಿಕಾರದ ಸಾರ್ವಭೌಮತ್ವದ ಆಶಂಸೆ ಭಾಸನ ನಾಟಕಗಳಲ್ಲಿ ಅಲ್ಲಲ್ಲೇ ಬರುವುದಲ್ಲದೆ, ಅವನ ಭರತವಾಕ್ಯಗಳಲ್ಲಿ ಸಾಮಾನ್ಯತಃ ಇದ್ದೇ ಇದೆ. ವಿರಾಟಸ್ಯ ವರ್ಷವರ್ಧನ ಗೋಪ್ರದಾನೇ......ವಿರಾಟ ಮಹಾರಾಜನ ವರ್ಷವರ್ಧಂತಿ ಪ್ರಯುಕ್ತ ಅನೇಕ ಸಂಖ್ಯೆಯಲ್ಲಿ ಗೋದಾನ ಮಾಡುವ ಏರ್ಪಾಟು ಇತ್ತು. ಕಿಂನು ಖಲ್ವೇಷ ವಾಯಸಃ...ವಿಲಪತಿ? ಕಾಗೆ ವಿಕಾರವಾಗಿ ಕೂಗುವುದು ಭಾವೀ ಅಮಂಗಲದ ಮುನ್ಸೂಚನೆ. ನೋಡಿ— 'ರೂಕ್ಷಸ್ವರಂ ವಾಶತಿ ವಾಯಸೋಽಯಂ' ಮತ್ತು 'ಶುಷ್ಕವೃಕ್ಷಸ್ಥಿತೋ ಧ್ವಾಂಕ್ಷ ಆದಿತ್ಯಾಭಿಮುಖಸ್ತಥಾ'—ಮೃಚ್ಛಕಟಿಕ ix 10–11.

13 ದಿವಾಚಂದ್ರಪ್ರಭಾ......—ಚಾರುದತ್ತ iv 1 ರಲ್ಲೂ 'ದಿವಾಚಂದ್ರ ಇವಾಸ್ಮಿ ಭೀತಃ' ಎಂದು ಭಾಸ 'ದಿವಾಚಂದ್ರ' ಶಬ್ದವನ್ನು ಪ್ರಯೋಗಿಸಿದ್ದಾನೆ. ದಿವಾ ದೃಶ್ಯಮಾನಃ ಚಂದ್ರಃ—ದಿವಾಚಂದ್ರಃ; ಹಗಲು ಕಾಣಿಸುವ ಚಂದ್ರ; ಬಿಳುಪೇರಿದ, ಮುಸಕುಮುಸಕಾಗಿ ಕಾಣಿಸುವ ಪ್ರಭೆಯುಳ್ಳ ಜ್ಯೋತ್ಸ್ನಾವಗುಂಠಿತಮಂಡಲಃ. ಇಲ್ಲಿ 'ಜ್ಯೋತ್ಸ್ನಾ' ಶಬ್ದಕ್ಕೆ 'ರಜೋ' ಎಂಬ ಪಾಠಾಂತರವಿದೆ.

14 ದಧಿಪಿಂಡಪಾಂಡುರ...—ಗೋಪಾಲಕರಾದುದರಿಂದ ತಮ್ಮ ನಿತ್ಯಪರಿಚಯದ 'ಮೊಸರಿನ ಗರಣೆ'ಯಂತೆ ಬಿಳುಪಾಗಿರುವ ಎಂಬ ಉಪಮಾನವನ್ನಿಲ್ಲಿ ಬಳಸಿರುವುದು ಸನ್ನಿವೇಶದ ಸ್ವಾಭಾವಿಕತೆಯನ್ನು ಹೆಚ್ಚಿಸುತ್ತದೆ. ಅವಿಮಾರಕದಲ್ಲೂ ಇದೇ ಉಪಮಾನ ಬಳಸಲ್ಪಟ್ಟಿದೆ—'ದಧಿಪಿಂಡಪಾಂಡರೇಷು ಪ್ರಾಸಾದೇಷು'—ಅಂಕ ೨. ಛತ್ರೈಃ—ಛತ್ರೈಃ ಉಪಲಕ್ಷಿತಾಃ; 'ಚೋರಾಃ' ಎಂಬುದರೊಡನೆ ಅನ್ವಯ.

15 ಪಕ್ಕಣಂ—ಗುಡಿಸಲು. 'ಪಕ್ಕಣಃ ಶಬರಾಲಯಃ'—ಅಮರ. ಅಲ್ಲೇ ಪಕ್ಕದಲ್ಲಿದ್ದ ಗುಡಿಸಲುಗಳು. ಚಂಡಾಲ ಜಾತಿಯವರು ವಾಸಿಸುವ ಗುಡಿಸಲಿಗೆ ಪಕ್ಕಣ

ಎಂಬ ಹೆಸರಿದೆಯೆಂದು ಪುಸಲ್ಕರ್ ಎಂಬ ವಿದ್ವಾಂಸರು ಬರೆದಿದ್ದಾರೆ. ಪ್ರಾಯಃ ಈ ಅಭಿಪ್ರಾಯ ತಪ್ಪು. ಏಕೆಂದರೆ ಬಾಲಚರಿತ ೩ನೇ ಅಂಕದಲ್ಲೂ 'ಪಕ್ಕಣ' ಶಬ್ದದ ಪ್ರಯೋಗವಿದೆ. ಅಲ್ಲಿ ಈ ಅರ್ಥಕ್ಕೆ ಅವಕಾಶವೇ ಇಲ್ಲ.

17 ಪ್ರಹರತ ಎಂಬುದಕ್ಕೆ 'ಶತ್ರೂನ್' ಎಂಬ ಕರ್ಮಪದವನ್ನೂ ಗೃಹ್ಣೀತ ಎಂಬುದಕ್ಕೆ 'ಗಾವಃ' ಎಂಬ ಕರ್ಮಪದವನ್ನೂ ಅಧ್ಯಾಹಾರಮಾಡಿಕೊಳ್ಳಬೇಕು.

18 ಪ್ರವೇಶಕ—I 60ರ ಟಿಪ್ಪಣಿ ನೋಡಿ.

24 ಕಾಂಚುಕೀಯಃ ಎಂದು ಭಾಸ ತನ್ನ ನಾಟಕಗಳಲ್ಲಿ ಪ್ರಯೋಗಿಸಿದ್ದರೆ, ಇತರ ನಾಟಕಕಾರರು 'ಕಂಚುಕೀ' ಎಂಬ ಶಬ್ದವನ್ನು ಬಳಸಿದ್ದಾರೆ.

25 ಬದ್ಧಗೋಧಾಂಗುಲಿತ್ರಾಃ—ಅಂಗುಲಿಂ ತ್ರಾಯತೇ ಇತಿ ಅಂಗುಲಿತ್ರಂ; ಗೋಧಾ ಚ ಅಂಗುಲಿತ್ರಂ ಚ—ಗೋಧಾಂಗುಲಿತ್ರೇ; ಬದ್ಧೇ ಗೋಧಾಂಗುಲಿತ್ರೇ ಯೈಃ ತೇ—ಬದ್ಧಗೋಧಾಂಗುಲಿತ್ರಾಃ. ಗೋಧಾ = ಎಡ ಮೊಣಕೈಗೆ ಯೋಧರು ಕಟ್ಟಿಕೊಳ್ಳುವ ಚರ್ಮದ ಪಟ್ಟಿ. "ಗೋಧಾ ಪ್ರಾಣಿವಿಶೇಷೇ ಸ್ಯಾತ್ ಜ್ಯಾಘಾತಸ್ಯ ಚ ವಾರಣೇ"—ಅಭಿಧಾನಕೋಶ. ಗುಧ ಪರಿವೇಷ್ಟನೇ ಧಾತುವಿನಿಂದ ಗೋಧಾ ಶಬ್ದ ನಿಷ್ಪನ್ನವಾಗಿದೆಯೆಂಬುದು ಕ್ಷೀರಸ್ವಾಮಿಯ ಮತ. ಅಂಗುಲಿತ್ರ—ಬಲಗೈ ಬೆರಳುಗಳಿಗೆ ಬಾಣಪ್ರಯೋಗಕಾಲದಲ್ಲಿ ರಕ್ಷಣೆ ನೀಡುವ (ಚರ್ಮದ ?) ಸಾಧನ.

26 ಅಕಾಲನಿವೇದನಂ—ಇದೇ ರೀತಿಯ ಭಾವಕ್ಕೆ ಮುಂದೆ ಅಕಾಲೇ ಸಾಂತ್ವವಚನಂ ಮನ್ಯುಮುತ್ಪಾದಯಿಷ್ಯತಿ—II 100 ಮತ್ತು ಪ್ರತಿಜ್ಞಾ III 4 ನೋಡಿ.

27 ಅತಿಪಾತಿ—ಅನ್ಯಾನಿ ಸರ್ವಾಣಿ ಕಾರ್ಯಾಣಿ ಅತಿಕ್ರಮ್ಯ ಪತತಿ ಇತಿ. ತುಂಬ ಅಗತ್ಯವಾದ; ತುರ್ತಾದ. ಅಭಿಷೇಕ iv ರಲ್ಲೂ ಈ ಶಬ್ದದ ಪ್ರಯೋಗವಿದೆ.

30 ಮಾ ತಾವತ್—'ನಾಚಿಗೆ ಗೇಡು' 'ಧಿಕ್ಕಾರವಿರಲಿ' ಎಂಬ ಅರ್ಥದಲ್ಲಿ 'ಮಾ ತಾವತ್' ಎಂದು ಭಾಸ ಬಹಳ ಕಡೆ ಪ್ರಯೋಗಿಸಿದ್ದಾನೆ. ಮುಂದೆ iii 5ರಲ್ಲೂ ನೋಡಿ. ಕರಾಣಿ = ಕಪ್ಪಕಾಣಿಕೆಗಳನ್ನು. ಕರ ಶಬ್ದದ ನಪುಂಸಕ ಲಿಂಗಪ್ರಯೋಗ ಅಪೂರ್ವ. 'ಪುನ್ನಪುಂಸಕಯೋಃ ಶ್ಲೋರಂ ಕರಮಾಹಾರ್ಯಮಿತ್ಯಪಿ'—ವೈಜಯಂತೀ.

31 (ಪ್ರವಿಶ್ಯ) ಭಟಃ—ಇಲ್ಲಿ 'ಪ್ರವಿಶ್ಯ' ಎಂಬ ರಂಗಸೂಚನೆ ಅನವಶ್ಯಕ. ಜಯಸೇನ ಎಂಬ ಈ ಭಟ ಸ್ವಲ್ಪಹೊತ್ತಿಗೆ ಮುಂಚೆ ಕಾಂಚುಕೀಯನೊಡನೆ ಮಾತಾಡುತ್ತಿದ್ದವನು ರಂಗಮಂಚದಿಂದ ಹೊರಕ್ಕೆ ಹೋದುದಾಗಿ ಈ ಹಿಂದೆ ಹೇಳಿಲ್ಲ.

34 ಏಷ ಸಮಾಸಃ=ಒಟ್ಟು ಸಾರಾಂಶ ಇದು. ಅವಿಮಾರಕ ii ಮತ್ತು ಪ್ರತಿಜ್ಞಾ ii ರಲ್ಲೂ ಇದೇ ಅರ್ಥದಲ್ಲಿ ಈ ಪ್ರಯೋಗವಿದೆ. ವಿಪ್ರಿಯಾಣಿ = ಅಪ್ರಿಯಾಣಿ.

37 ರಣಶಿರಸಿ...ಧರ್ಮಃ—ಈ ವಾಕ್ಯದೊಡನೆ ಮುಂದಿನವುಗಳನ್ನು ಹೋಲಿಸಿ—(1) ಹತೋಽಪಿ ಲಭತೇ ಸ್ವರ್ಗಂ ಜಿತ್ವಾ ತು ಲಭತೇ ಯಶಃ। ಉಭೇ ಬಹುಮತೇ

ಲೋಕೇ ನಾಸ್ತಿ ನಿಷ್ಫಲತಾ ರಣೇ॥ ಕರ್ಣಭಾರ 12; (2) ಜೀವನ್ ಸ ಪ್ರಾಪ್ಸ್ಯತೇ ರಾಜ್ಯಂ ಮೃತೋ ವಾ ಸ್ವರ್ಗಮೇಷ್ಯತಿ।—ಪಂಚತಂತ್ರ iii; ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ।—ಭಗವದ್ಗೀತಾ ii. ಮೋಕ್ಷಯಿತ್ವಾ (ಧಾತು ಮೋಕ್ಷ್)—ಇಲ್ಲಿ ಇದನ್ನು ಮೋಚಯಿತ್ವಾ ಎಂಬ ಅರ್ಥದಲ್ಲೇ ಬಳಸಲಾಗಿದೆ. ಮುಂದೆ II [53]ರಲ್ಲೂ ನೋಡಿ.

39 ಮಾಂ ಅಂತರೇಣ = ಮಾಂ ಪ್ರತಿ; ನನ್ನ ಬಗ್ಗೆ. ವಿರಾಟನಿಗೆ ಪಾಂಡವರಮೇಲೆ ಇದ್ದ ಪ್ರೀತಿ ಯಾರಿಗೂ ಪ್ರತ್ಯಕ್ಷ ಗೋಚರವಾಗಿದ್ದಿಲ್ಲ. ಆದ್ದರಿಂದ ಇಲ್ಲಿ 'ಪರೋಕ್ಷಮಪಿ' ಎಂದು ಹೇಳಿರುವುದು.

40 ಅರ್ಥಿತ್ವಾತ್—ಇಲ್ಲಿ ವಿರಾಟರಾಜನು 'ಅರ್ಥಿ'ಯೂ ಹೌದು, 'ಕಾರ್ಯವಾನ್'ನೂ ಹೌದು. ಆದ್ದರಿಂದಲೇ ದುರ್ಯೋಧನನ ವಿಚಾರವಾಗಿ ತಾನು ಭಗವಾನ್‌ನನ್ನು ಪ್ರಶ್ನಿಸುವುದು ಸರಿ ಎಂದು ಇಲ್ಲಿ ಸಮರ್ಥಿಸಲು ಯತ್ನಿಸಿದ್ದಾನೆ.

43 ಭಗವಾನ್ + ತಾವತ್ = ಭಗವಾಂಸ್ತಾವತ್. ಭಗವಾಂಸ್ತಾವತ್ ಆಹೂಯತಾಂ—ಕರ್ಮಣಿ ಪ್ರಯೋಗ. ಭಗವಂತಂ ತಾವತ್ ಆಹ್ವಯ—ಕರ್ತರಿ ಪ್ರಯೋಗ.

47 ಸಮುದ್ಯೋಗಂ—ಈ ಪದವೂ ಮುಂದಿನ ೮ನೇ ಶ್ಲೋಕದಲ್ಲಿ ಬರುವ ಉದ್ಯೋಗಃ ಎಂಬ ಪದವೂ 'ಯುದ್ಧಕ್ಕಾಗಿ ಮಾಡುವ ಏರ್ಪಾಟು' ಎಂಬ ಅರ್ಥದಲ್ಲಿವೆ. ಉದ್ಯೋಗಪರ್ವ ಎಂಬಲ್ಲೂ ಹಾಗೆಯೇ. I [78] ರ ಟಿಪ್ಪಣಿ ನೋಡಿ.

53 ಇಲ್ಲಿ ಬರುವ "ಶ್ರೀಃ ನ ಸಂತೋಷ ಮಿಚ್ಛತಿ" ಎಂಬುದರೊಡನೆ (1) ಸಾಹಸೇ ಖಲು ಶ್ರೀಃ ವಸತಿ—ಚಾರುದತ್ತ iv ಮತ್ತು (2) ರಾಜಾ—ಗುರುಪುತ್ರ, ಫಲಮ್ ಅಪರಿತೋಷಸ್ಯ.—ಊರುಭಂಗ;—ಇವೆರಡು ವಾಕ್ಯಗಳನ್ನೂ ಪರಿಶೀಲಿಸಿ. ಅರಮನೆಗೆ ಬರುವಾಗ ದಾರಿಯುದ್ದಕ್ಕೂ ಯುದ್ಧಕ್ಕಾಗಿ ಏರ್ಪಾಟು ನಡೆಯುತ್ತಿದ್ದುದನ್ನು ಗಮನಿಸಿದ್ದ ಭಗವಾನನು ಈ ಪ್ರಶ್ನೆಯನ್ನು ಕೇಳುವುದು ಸಹಜ.

58 ಏಕೋದಕತ್ವಂ—ಏಕಂ ಉದಕಂ (ನಿವಾಪೋದಕಂ) ಯೇಷಾಂ ತೇ ಏಕೋದಕಾಃ; ತೇಷಾಂ ಭಾವಃ। ಒಂದೇ ಪಿತೃವರ್ಗಕ್ಕೆ ಸೇರಿ ತರ್ಪಣಕಾಲದಲ್ಲಿ ಒಂದೇ ತಿಲೋದಕಕ್ಕೆ ಭಾಗಿಯಾಗಿರುವಿಕೆ; ಜ್ಞಾತಿಬಾಂಧವ್ಯ.

61 ಅಜ್ಞಾತವಾಸದಲ್ಲಿದ್ದ ಯುಧಿಷ್ಠಿರನೊಡನೆಯೇ ಅವನಾರೆಂಬುದನ್ನರಿಯದ ವಿರಾಟ ಈ ಮಾತು ಹೇಳುತ್ತಿರುವುದು ನಾಟಕದ ದೃಷ್ಟಿಯಿಂದ ಸ್ವಾರಸ್ಯವಾಗಿದೆ.

63 ಸರ್ವಂ ಶ್ಲಾಘ್ಯಂ...ಮೇ—ಯುಧಿಷ್ಠಿರನ ಈ ಮಾತಿನೊಡನೆ ಪ್ರತಿಜ್ಞಾಯೌಗಂಧರಾಯಣ iii ರಲ್ಲಿ ವಿದೂಷಕನಾಡುವ 'ಶ್ಲಾಘನೀಯಂ ಭವೇತ್ ಯದಿ ಲೋಕೋ ಜಾನಾತಿ' ಎಂಬುದರೊಡನೆ ಪರಿಶೀಲಿಸಿ.

66 ಪೃಥಿವ್ಯಾಂರಾಜಾನಃ = ಪೃಥಿವ್ಯಾಂ ಸ್ಥಿತಾಃ ರಾಜಾನಃ. I[11] ಗರ್ಜನ್ ನೃಪೇ ಸದ್ಮ ಗೈಃ ಎಂಬಲ್ಲಿನ ಟಿಪ್ಪಣಿ ನೋಡಿ.

68 ದುರ್ಯೋಧನನ ಕಡೆಯಿಂದ ಯುದ್ಧಮಾಡಲು ಭೀಷ್ಮ ಬಂದಿದ್ದರೂ ಅವನ ಬಗ್ಗೆ ವಿರಾಟನ ಪೂಜ್ಯಬುದ್ಧಿಯನ್ನು ಗಮನಿಸಿ. ಮುಂದೆ II[76]ನ್ನೂ ನೋಡಿ. ಆದ್ದರಿಂದಲೇ ವಿರಾಟನ ನಡವಳಿಕೆಯನ್ನು ಭಗವಾನನು ಕೊಡಲೇ 6 ರಲ್ಲಿ ಮೆಚ್ಚಿ ಕೊಂಡಾಡುತ್ತಾನೆ.

70 ತಮ್ಮ ಅಜ್ಞಾತವಾಸದ ಅವಧಿ ಮುಗಿದು ಪ್ರತಿಜ್ಞೆ ಈಡೇರಿದಂತಾಗಿತ್ತೆಂಬುದು ಯುಧಿಷ್ಠಿರನಿಗೆ ತಿಳಿದಿತ್ತೆಂದು ಇದರಿಂದ ಹೇಳಬಹುದು. ಹಿರಿಯರಾದ ಭೀಷ್ಮದ್ರೋಣಾದಿಗಳು ಅಧರ್ಮಭೂಯಿಷ್ಠವಾದ ಗೋಗ್ರಹಣ ಯುದ್ಧಕ್ಕೆ ಬರುವವರಲ್ಲವೆಂದೂ, ಅವರು ಬಂದಿರುವುದು ಪಾಂಡವರಾದ ತಮ್ಮ ಪ್ರತಿಜ್ಞೆಯು ಈಡೇರಿತೆಂದು ತಿಳಿಸಲು ಮಾತ್ರವೆಂದೂ ಯುಧಿಷ್ಠಿರ ಭಾವಿಸುವುದು ಅವನ ಘನತೆಯನ್ನು ಸೂಚಿಸುತ್ತದೆ.

74-75 ಸೂತನನ್ನು ಕರೆತರಲು ಭಟ ನಿಷ್ಕ್ರಮಿಸಿನೊಡನೆಯೇ, ಪ್ರವಿಶ್ಯ ಎಂಬ ರಂಗಸೂಚನೆಯಿಂದ ಸೂತನನ್ನು ರಂಗಮಂಚದಮೇಲೆ ಬರಮಾಡಿರುವುದು, ನಾಟಕ ಎಷ್ಟು ಬೇಗ ಬೇಗ ಸಾಗುತ್ತದೆಂಬುದನ್ನು ಸೂಚಿಸುತ್ತದೆ. ಈ ಬಗೆಯಲ್ಲಿ ತುಂಬ ತ್ವರೆಯನ್ನು ಸೂಚಿಸುವ ರಂಗಸೂಚನೆ ಭಾಸನ ಎಲ್ಲ ನಾಟಕಗಳಲ್ಲೂ ವಿಶೇಷವಾಗಿಯೇ ಇವೆ. (ಪೀಠಿಕೆ ಪುಟ 8 ನೋಡಿ.)

76 ರಣಾತಿಥಿಃ—ರಣಾರ್ಥಂ (ಅಥವಾ ರಣೇ) ಪ್ರಾಪ್ತಃ ಅತಿಥಿಃ. ಅಭಿಷೇಕನಾಟಕ iv ರಲ್ಲೂ ಕಕ್ಷಿಪ್ರತಿಕಕ್ಷಿಗಳನ್ನು ರಣಾತಿಥಿಯೆಂದೇ ಭಾಸ ನಿರ್ದೇಶಿಸುತ್ತಾನೆ. 'ಅಗತೋऽಹಂ ನ ಪಶ್ಯಾಮಿ ಪ್ರಷ್ಟುಕಾಮೋ ರಣಾತಿಥಿಃ'. ಮೇಲಿನ 68ನೇ ಟಿಪ್ಪಣಿ ನೋಡಿ.

78 ವಿರಾಟನು ದಕ್ಷಿಣ ಗೋಗ್ರಹಣದಲ್ಲಿ ನಿರತನಾಗಿದ್ದನೆಂದೂ ಉತ್ತರನು ಬೃಹನ್ನಳೆಯ ಬಲವಂತಕ್ಕಾಗಿ, ಅವಳ ಸಾರಥ್ಯದಲ್ಲಿ, ಯುದ್ಧಭೂಮಿಗೆ ತೆರಳಿದನೆಂದೂ ಮಹಾಭಾರತದಲ್ಲಿ ಹೇಳಿದೆ. ಈ ನಾಟಕದ ಪ್ರಕಾರ ವಿರಾಟನು ತನ್ನ ವರ್ಷವರ್ಧಂತಿಯ ಆಚರಣೆಯಲ್ಲಿದ್ದು ಉತ್ತರನೇ ಆ ದಿನದ ಯುದ್ಧದಲ್ಲಿ ಮುಂದಾಳಾಗುತ್ತಾನೆ. ಅದಲ್ಲದೆ ಈ ನಾಟಕದ ಉತ್ತರ ಅಂಜುಬುರುಕನಲ್ಲ, ವೀರ ಎಂಬುದನ್ನೂ ಗಮನಿಸಿ.

81 ಯುದ್ಧದೋಷಾನ್ ಬ್ರವೀಮಿ—ಇಲ್ಲಿ ದೋಷ=ಅಪಾಯ. ಇದೇ ಅರ್ಥದಲ್ಲಿ 'ಪೂರ್ವಂ ತಾವತ್ ಯುದ್ಧಸಂಬದ್ಧ ದೋಷಾಃ' ಪ್ರತಿಜ್ಞಾ I 13ರಲ್ಲೂ ದೋಷಶಬ್ದ ಪ್ರಯೋಗಿಸಲ್ಪಟ್ಟಿದೆ. ನ ಖಲು ಪರಿಭವಾತ್‌ತೇ—ಯುಧಿಷ್ಠಿರನು ವಿರಾಟನಿಗೆ ಎಷ್ಟು ವಿನಯದಿಂದ ಈ ಎಚ್ಚರಿಕೆಯ ಮಾತು ಹೇಳುತ್ತಿದ್ದಾನೆ, ಗಮನಿಸಿ. ರಾಮಾಯಣದಲ್ಲಿ ಸೀತೆಯೂ ರಾಮನೊಡನೆ ಇಂತಹ ಸಂದರ್ಭದಲ್ಲೇ ಆಡುವ 'ಸ್ಮಾರಯೇ ನ ತು ಶಿಕ್ಷಯೇ' ಎಂಬ ಮಾತನ್ನು ಇಲ್ಲಿ ಸ್ಮರಿಸಬಹುದು.

Funding: IKS/Tattva Heritage. Digitization: Sarayu Trust/eGangotri



83-84 ಇಂತಹ ಸನ್ನಿವೇಶ, ಸಂಭಾಷಣೆ ಪ್ರಾಯಃ ಭಾಸನ ಎಲ್ಲ ನಾಟಕಗಳಲ್ಲೂ ಬರುತ್ತವಾದ್ದರಿಂದ, ಇವನ್ನು ಅವನ ನಾಟಕಗಳ ವೈಶಿಷ್ಟ್ಯವೆನ್ನಬಹುದು. ಪ್ರತಿಜ್ಞಾ ii ನೋಡಿ.

86 ಅನನುಜ್ಞಾತೋಽಸಿ ಕಿಂ ತೇನ? ರಾಜ್ಞಾಂ ನ ಸಾರಥಿಃ ಭರ್ತಾ? ಈ ಎರಡು ವಾಕ್ಯಗಳ ಮಧ್ಯೆ ಅಥವಾ, ಯದ್ವಾ ಮಾದರಿಯ ವಿಕಲ್ಪಸೂಚಕವಾದ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪದ್ಯಗಳಲ್ಲಿ ಇಂತಹ ಶಬ್ದವನ್ನು ಭಾಸ ಪ್ರಾಯಃ ಬಿಟ್ಟುಬಿಟ್ಟಿರುತ್ತಾನೆ. ಈ ನಾಟಕದಲ್ಲೇ i 35cd; i 39d; ii 47cd ನೋಡಿ.

91 ಈ ಶ್ಲೋಕದೊಡನೆ ಶಾಕುಂತಲನಾಟಕದ ಮುಂದಿನ ಈ ಶ್ಲೋಕವನ್ನು ಹೋಲಿಸಿ ನೋಡಿ–ಕಾ ಕಥಾ ಬಾಣಸಂಧಾನೇ ಜ್ಯಾಶಬ್ದೇನೈವ ದೂರತಃ। ಹುಂಕಾರೇಣೈವ ಧನುಷಃ ಸ ಹಿ ವಿಘ್ನಾನಪೋಹತಿ ॥ ಅಂಕ ೩.

92 ತೇನ ಹಿ ಅನ್ಯೋ ರಥಃ...— ಹಿಂದೆ 82ರಲ್ಲೂ ಇದೇ ಮಾತು.

93-94 ಹಿಂದೆ 74-75 ರಲ್ಲೂ ಇದೇ ರೀತಿಯ ರಂಗಸೂಚನೆ. ಅಲ್ಲಿನ ಟಿಪ್ಪಣಿ ನೋಡಿ.

94 ಭಗ್ನಃ— ಕಕ್ಕಾವಿಕ್ಕಿಯಾಯಿತು; ತಡೆಯಲ್ಪಟ್ಟಿತು; ಮುರಿದುಬಿತ್ತು. ಈ ಮಾತು ಹೇಳಿ ನಿಜಾಂಶ ತಿಳಿಯಲು ವಿರಾಟನಲ್ಲಿ ಕುತೂಹಲ ಹುಟ್ಟಿಸಿ ಬಳಿಕ ವಿವರ ತಿಳಿಸುವುದು ನಾಟಕ ಕಳೆ ಕಟ್ಟುವುದಕ್ಕಾಗಿ.

97 ಅಶ್ವಪಥಃ— ಇಲ್ಲಿ ಪಥಿನ್ ಶಬ್ದ ಸಮಾಸಾಂತದಲ್ಲಿ ಅಕಾರಾಂತವಾಗಿದೆ.

98 ಶ್ಮಶಾನದ ಬಳಿ ಅರ್ಜುನ ತನ್ನ ಗಾಂಡೀವವನ್ನು ಬನ್ನಿಮರವೊಂದರಮೇಲೆ ಬಚ್ಚಿಟ್ಟು, ಬಳಿಕ ಬೃಹನ್ನಳೆಯಾಗಿ ವಿರಾಟನ ಆಸ್ಥಾನದಲ್ಲಿ ಅಜ್ಞಾತವಾಸದಲ್ಲಿದ್ದುದು. ಭಟನ ಮಾತನ್ನು ಕೇಳಿದೊಡನೆ ಯುಧಿಷ್ಠಿರನಿಗೆ ಈ ವಿಚಾರ ನೆನಪಿಗೆ ಬಂದು, 'ಆಃ! ಅತ್ರ ಖಲು ಗಾಂಡೀವಂ' ಎಂದು ತನ್ನಲ್ಲಿ ತಾನೇ ಸಮಾಧಾನಪಟ್ಟುಕೊಳ್ಳುತ್ತಾನೆ.

100 ಅಕಾಲೇ ಸ್ವಸ್ಥವಾಕ್ಯಂ ಮನ್ಯುಮುತ್ಪಾದಯತಿ— ಇದರೊಡನೆ ಹಿಂದೆ II 26ರ 'ಅಕಾಲನಿವೇದನಂ ಮನ್ಯುಮುತ್ಪಾದಯತಿ' ಎಂಬುದನ್ನು ಪರಿಶೀಲಿಸಿ.

101 ಈ ಉತ್ತರ ವಿರಾಟನಿಗೆ ಸಮಾಧಾನ ಉಂಟುಮಾಡುತ್ತದೆ. ಬ್ರಾಹ್ಮಣರಲ್ಲಿ ಅವನಿಗೆ ಅಷ್ಟು ಪ್ರತಿಪತ್ತಿ. ಆ ಕಾಲದಲ್ಲಿ ಬ್ರಾಹ್ಮಣ ಸುಳ್ಳಾಡುತ್ತಿರಲಿಲ್ಲ. ಅವನು ಸುಳ್ಳಾಡುವುದಿಲ್ಲವೆಂಬುದನ್ನು ಎಲ್ಲರೂ ತಿಳಿದು ಅವನ ಎಲ್ಲ ಮಾತನ್ನೂ ನಂಬುತ್ತಿದ್ದರು.

ಪ್ರತಿಜ್ಞಾಯೌಗಂಧರಾಯಣ ಅಂಕ II 77ರಲ್ಲಿ ಬರುವ ಈ ಸಂದರ್ಭವನ್ನೂ ಗಮನಿಸಿ.— ಕಾಂಚುಕೀಯಃ— ಪ್ರಸೀದತು ಮಹಾರಾಜಃ। ವೃದ್ಧೋಽಸ್ಮಿ; ಬ್ರಾಹ್ಮಣಃ ಖಲ್ವಹಂ। ನ ಮಹಾಸೇನಸಮೀಪೇ ಅನೃತಮಭಿಹಿತಪೂರ್ವಂ ॥ ರಾಜಾ— ಆ, ಅಸ್ತ್ಯೇತತ್. ಬಾಲಚರಿತ ೨ನೇ ಅಂಕದಲ್ಲೂ ಕಾಂಚುಕೀಯಃ— ಪ್ರಸೀದತು

ಮಹಾರಾಜಃ। ಅನೃತಂ ನಾಭಿಹಿತಪೂರ್ವಂ ಮಯಾ॥ ಕಾಂಚುಕೀಯ ಒಬ್ಬ ವೃದ್ಧ ಬ್ರಾಹ್ಮಣ ಅಧಿಕಾರಿ.

102 ಗಚ್ಛ; ಭೂಯೋ ಜ್ಞಾಯತಾಂ ವೃತ್ತಾಂತಃ—ಮುಂದೆ 120ರಲ್ಲೂ ಇದೇ.

103-106 ಹಿಂದಿನ ii 71-75 ರ ಟಿಪ್ಪಣಿಯನ್ನು ನೋಡಿ.

104 ಈ ಶ್ಲೋಕವ 1 ಮತ್ತು 4ನೇ ಪಾದಗಳೊಡನೆ ಪ್ರತಿಜ್ಞಾ iv 23ನೇ ಶ್ಲೋಕದ ಭಾಗಗಳನ್ನು ಪರಿಶೀಲಿಸಿ.—ಕೋ ನು ಖಲ್ವೇಷ ಸಹಸಾ ಪ್ರಾಸಾದಾಗ್ರಾದ್ವಿನಿಃಸೃತಃ। ಶ್ಯೇನಪಕ್ಷಾಭಿಮೃಷ್ಟಾನಾಂ ಕು:ರೀಣಾಮಿವ ಧ್ವನಿಃ।

105 ಜ್ಞಾಯತಾಂ ಶಬ್ದಃ—ರಾಜನು ಯಾರನ್ನು ಕುರಿತು ಹೀಗೆ ಅಜ್ಞಾಪಿಸುತ್ತಾನೆಂಬುದು ಸ್ಪಷ್ಟವಾಗಿಲ್ಲ. 103ರಲ್ಲಿ ಭಟ ಬೇರೆಯ ಕೆಲಸದಮೇಲೆ ಹೋಗಿದ್ದು 105ರ ಈ ಆಜ್ಞೆ ಆದಕೂಡಲೇ ಯುದ್ಧವೃತ್ತಾಂತದೊಡನೆ ಬರುತ್ತಾನೆ.

109 ಸ್ರನತಿ—ಇಲ್ಲಿ ಸಕರ್ಮಕವಾಗಿ ಪ್ರಯೋಗಿಸಲ್ಪಟ್ಟದೆ. ಸ್ರು ಧಾತು ಅಕರ್ಮಕ. ii 208 ಟಿಪ್ಪಣಿ ನೋಡಿ.

110 (ಏತತ್) ಅಕ್ಷಯ ತೂಣೀಸ್ವಂ=(ಮೇಲೆ ಹೇಳಿದುದು) (ಅರ್ಜುನನ) ಎರಡು ಅಕ್ಷಯವಾದ ಬತ್ತಳಿಕೆಗಳ ಫಲ. ಆ ಬತ್ತಳಿಕೆಗಳಲ್ಲಿ ಯಾವಾಗಲೂ ಬಾಣಗಳು ತುಂಬಿಯೇ ಇರುತ್ತಿದ್ದುವು. 'ಪ್ರಾದಾಚ್ಚೈವ ಧನೂರತ್ನಂ ಅಕ್ಷಯ್ಯಾ ಚ ಮಹೇಷುಧೀ'—ಮಹಾಭಾರತ, ಆದಿಪರ್ವ ಅಧ್ಯಾಯ 225. ಮುಂದೆ ೨ನೇ ಅಂಕದ 61ನೇ ಶ್ಲೋಕದಲ್ಲೂ ಭಾಸ 'ಶ್ರಶಾನಾದ್ಧನುರಾದಾಯ ತೂಣೀ ಚಾಕ್ಷಯಸಾಯಕೇ' ಎಂದು ಅರ್ಜುನನ ಈ ಬತ್ತಳಿಕೆಗಳನ್ನು ನಿರ್ದೇಶಿಸಿದ್ದಾನೆ. ಯೇನ ಶಕ್ರಸ್ಯ ಖಾಂಡವೇ—ಖಾಂಡವ ದಹನದ ಪ್ರಸ್ತಾಪ ದೂತವಾಕ್ಯದಲ್ಲೂ ಬರುತ್ತದೆ.—'ವಹ್ನೇಃ ಖಾಂಡವಮಶ್ನತಃ ಸುಮಹತೀ ವೃಷ್ಟಿಃ ಶರೈಃ ಪಾತಿತಾ॥—32.

112 ಪ್ರವೃತ್ತಿಪುರುಷಾಃ—ಸುದ್ದಿಗಾರರು. ಭಾಸನ ಕಾಲದಲ್ಲೂ ಯುದ್ಧಭೂಮಿಯಲ್ಲಿ ಸುದ್ದಿಗಾರರಿರುತ್ತಿದ್ದರೆಂದು ಇವರಿಂದ ತಿಳಿಯುತ್ತದೆ. ಮುಂದೆ 124 ನೋಡಿ.

113 ಧ್ವಜೇ ಬಾಣಂ ದೃಷ್ಟ್ವಾ—ಅರ್ಜುನನು ಪಿತಾಮಹನಾದ ಭೀಷ್ಮನ ಮೇಲಣ ಗೌರವದಿಂದ ಅವನ ಧ್ವಜಕ್ಕೆ ವಂದನಾಪೂರ್ವಕವಾಗಿ ಬಾಣ ಬಿಟ್ಟಿದ್ದನು. ಅದು ಧ್ವಜಕ್ಕೆ ನಾಟಿಕೊಂಡಿತು. ಇದನ್ನು ಗಮನಿಸಿದ ಭೀಷ್ಮ ಅರ್ಜುನನನ್ನು ಗುರ್ತಿಸಿ, ಕೃತಂ (=ಇನ್ನು ಸಾಕು) ಎಂದು ಬಾಣಪ್ರಯೋಗ ಮಾಡುವುದನ್ನು ನಿಲ್ಲಿಸಿಬಿಟ್ಟ. ಇದೇ ಬಾಣದ ಪ್ರಸ್ತಾಪ ಮುಂದೆ III ಶ್ಲೋ 18 ರಲ್ಲೂ ಬರುತ್ತದೆ.—'ಉಚಿತಂ ತೇ ಪುರಾ ಕರ್ತುಂ ಧ್ವಜೇ ಬಾಣಪ್ರಧರ್ಷಿತೇ'.

117 ಭೀಷ್ಮಂ ರಾಮಶರೈಃ......—ಭೀಷ್ಮನಿಗೂ ಪರಶುರಾಮನಿಗೂ ಸಂಭವಿಸಿದ ಯುದ್ಧದಲ್ಲಿ, ಇಬ್ಬರೂ ಸಮಾನ ಪರಾಕ್ರಮಶಾಲಿಗಳಾಗಿದ್ದರೂ, ಪರಶುರಾಮನೇ

ಸೋತುದರ ಪ್ರಸ್ತಾಪವಿದು. (–ಮಹಾಭಾರತ ಉದ್ಯೋಗಪರ್ವ ಅಧ್ಯಾಯ 170-186). ದ್ರೋಣಂ ಚ ಮಂತ್ರಾಯುಧಂ—ದ್ರೋಣನು ಮಂತ್ರೋಚ್ಚಾರಣೆಯಿಂದಲೇ ಅಸ್ತ್ರಗಳನ್ನು ಪ್ರಯೋಗಿಸುತ್ತಿದ್ದ. ಶುಲ್ಕಂ ವಯೋ ರಕ್ಷತಿ—ಇದರೊಡನೆ ಮುಂದಿನ II 39a ಯನ್ನು ಪರಿಶೀಲಿಸಿ.

119 ಅರ್ಜುನನು ತೋರಿಕೆಗೆ ಮಾತ್ರ ಅಭಿಮನ್ಯುವಿನ ರಥದಮೇಲೆ ದಾಳಿ ಮಾಡುತ್ತಿದ್ದ. ಬೃಹನ್ನಳೆಯೇ ತನ್ನ ತಂದೆ ಅರ್ಜುನನೆಂಬುದನ್ನರಿಯದ ಅಭಿಮನ್ಯು ಉತ್ತರನ ಮೇಲೆ ಬಾಣಪ್ರಯೋಗ ಮಾಡುವಷ್ಟರಲ್ಲಿ ಅರ್ಜುನ ತನ್ನ ರಥವನ್ನು ಪಕ್ಕಕ್ಕೆ ತಿರುಗಿಸಿ ಬಾಣದ ಹೊಡೆತವನ್ನು ತಪ್ಪಿಸಿಕೊಳ್ಳುತ್ತಿದ್ದ. ಮುಂದೆ II 51cd ನೋಡಿ; ಅವನೇ ಹೇಳುತ್ತಾನೆ—ಅಪಮಪಿ ಚ ಪರಿಕ್ಷತೋ ಭವೇಯಂ ಯದಿ ನ ಮಯಾ ಪರಿವರ್ತಿತೋ ರಥಃ ಸ್ಯಾತ್ ॥ ಯೋಗ್ಯೋಪದೇಶಂ=(1) ಯೋಗ್ಯೇಭ್ಯಃ ಉಪದೇಶಂ (ಕರೋತಿ); ಇಲ್ಲಿ ಯೋಗ್ಯ=ರಥ. (2) ಯೋಗ್ಯಾಯಾಃ ಉಪದೇಶಂ (ಕರೋತಿ); ಇಲ್ಲಿ ಯೋಗ್ಯಾ=ಅಭ್ಯಾಸ. (ಯೋಗ್ಯಾ ಕರ್ಣಯೋಷಿತ್ಯಭ್ಯಾಸೇ) (3) ಯೋಗ್ಯಃ ಉಪದೇಶಃ, ತಂ; ಇಲ್ಲಿ ಯೋಗ್ಯಃ=ಉಪಯುಕ್ತವಾದ, ಯೋಗ್ಯವಾದ. ಮಹಾಭಾರತದಲ್ಲಿ ಯೋಗ್ಯಾ ಶಬ್ದದ ಪ್ರಯೋಗಕ್ಕೆ ಆದಿಪರ್ವ 132-25 (ತದಭ್ಯಾಸಕೃತಂ ಮತ್ವಾ ರಾತ್ರಾವಪಿ ಸ ಪಾಂಡವಃ। ಯೋಗ್ಯಾಂ ಚಕ್ರೇ ಮಹಾಬಾಹುಃ ಧನುಷಾ ಪಾಂಡುನಂದನಃ ॥) ಮತ್ತು 135-4 (ವಾರಯೈತಾ ಮಹಾಬಾಹೂ ಕೃತಯೋಗ್ಯಾವುಭಾವಪಿ) —ನೋಡಿ. ರಥಃ ಎಂಬ ಕರ್ತೃಪದ 118ರಲ್ಲೇ ಬಂದಿರುವುದರಿಂದ 119ರಲ್ಲಿ ಪುನಃ ಬರಬೇಕಾಗಿರಲಿಲ್ಲ.

190 ಹಿಂದೆ ಬಂದಿರುವ ii 103 ನೋಡಿ.

191 ಹಿಂದಿನ ii 103-104 ನೋಡಿ.

121 ಪ್ರಿಯಂ ನಿವೇದಯೇ ಮಹಾರಾಜಾಯ—ಇದರೊಡನೆ ಪ್ರತಿಜ್ಞಾಯಾ ii (ಪ್ರಿಯವಚನನಿವೇದನತ್ವರಯಾ ಕ್ರಮವಿಶೇಷೋ ನಾವೇಕ್ಷಿತಃ) ಪರಿಶೀಲಿಸಿ. ಅವಜಿತಂ ಗೋಗ್ರಹಣಂ ಎಂಬುದು ಅಪಸಿತಂ—ಎಂದಿದ್ದರೆ ಮುಂದಿನ ವಾಕ್ಯವಾದ ಅಪಯಾತಾ ಧಾರ್ತರಾಷ್ಟ್ರಾಃ ಎಂಬುದಕ್ಕೆ ಔಚಿತ್ಯವಿರುತ್ತದೆ.

124 ಯೋಧಪುರುಷಾಣಾಂ ಕರ್ಮಾಣಿ ಪುಸ್ತಕಮಾರೋಪಯತಿ ಮತ್ತು ಮುಂದಿನ 125 ಮತ್ತು 126—ಇವು ಭಾಸನ ಕಾಲದಲ್ಲಿ ಸಮರ ವ್ಯವಸ್ಥೆಗೆ ಸಂಬಂಧಿಸಿದ ವ್ಯವಹಾರಗಳು ಹೇಗಿದ್ದುವೆಂಬುದನ್ನು ಸೂಚಿಸುತ್ತವೆ. ಪ್ರತಿದಿವಸದ ಯುದ್ಧದಲ್ಲೂ ಗಣನೀಯ ಪರಾಕ್ರಮ ತೋರಿದ ಯೋಧರ ಹೆಸರುಗಳನ್ನು ಅಂದಿನ ಯುದ್ಧ ಮುಗಿದ ಕೂಡಲೇ ದಂಡನಾಯಕನೇ ಒಂದು ಪುಸ್ತಕದಲ್ಲಿ ವಿವರಗಳೊಡನೆ ಬರೆದಿಡಬೇಕಾಗಿತ್ತು. ಯೋಧರಿಗೆ ಸಂಬಂಧಿಸಿದ ಇಂತಹ ಪುಸ್ತಕಗಳ ಉಲ್ಲೇಖ ಭಾಸನ ಅಭಿಷೇಕನಾಟಕ,

ಅಂಕ 4ರಲ್ಲೂ ಬರುತ್ತದೆ. ಪ್ರತಿಜ್ಞಾ ii ನ್ನೂ ಪಂಚರಾತ್ರ ii 112ನ್ನೂ ಇತರ ಸಮರ ವ್ಯವಸ್ಥೆಗಳಿಗಾಗಿ ನೋಡಿ.

130-131 ಹಿಂದೆ ಬಂದಿರುವ II 74-6ರ ಟಿಪ್ಪಣಿ ನೋಡಿ.

133 ಅವಿಶದಾಃ—ಅಕುಶಲಾ. cf. ನೃತ್ತೋಪದೇಶವಿಶದೌ ಚರಣೌ ಕ್ಷಿಪನ್ತೀ—ಚಾರುದತ್ತ 19.

137 ಜಿತ್ವಾಪಿ ಗಾಂ—ಇಲ್ಲಿ ಗಾಂ (=ಗಾಃ) ಜಾತ್ಯೈಕವಚನ. ಗಾಂ=ಹಸುಗಳನ್ನು.

138 ರಾಜಾನಂ—ರಾಜಾ ಯುಧಿಷ್ಠಿರನನ್ನು.

140 ಭಗವನ್, ಅಭಿವಾದಯೇ—ಬೃಹನ್ನಳೆಯ ಈ ಮಾತುಗಳು 142ರಲ್ಲಿರುವಂತೆ ಪ್ರಾಕೃತದಲ್ಲೇ ಇರಬೇಕಾಗಿತ್ತು. ಆದರೆ ಪೂಜ್ಯನಾದ ಭಗವಾನನಿಗೆ ಹೇಳುತ್ತಿರುವುದರಿಂದ ಸಂಸ್ಕೃತದಲ್ಲಿದೆ.

146 ಬೃಹನ್ನಳೆ ಹೆಂಗಸಾದ್ದರಿಂದ ಪ್ರಾಕೃತದಲ್ಲೇ ಮಾತಾಡಲಾರಂಭಿಸುತ್ತಾಳೆ. ಆದರೆ ಯುದ್ಧದ ವಿಷಯವಾಗಿ ಹೇಳಬೇಕಾಗಿದ್ದುದರಿಂದ ಸಂಸ್ಕೃತದಲ್ಲೇ ಹೇಳುವಂತೆ ವಿರಾಟ ಸೂಚಿಸುತ್ತಾನೆ. ಹೀಗೆ ಆಡುವ ಭಾಷೆಯನ್ನು ಬದಲಾಯಿಸುವುದಕ್ಕೆ ಸಂಬಂಧಿಸಿದ ನಿಯಮ ಹೀಗಿದೆ—'ಕಾಲಾವಸ್ಥಾನಂತರಕೃತಂ ಯೋಜ್ಯಂ ಪಾಠ್ಯಂ ತು ಸಂಸ್ಕೃತಂ'—ಭರತ; 'ಕಾರ್ಯತಶ್ಚೋತ್ತಮಾದೀನಾಂ ಕಾರ್ಯೋ ಭಾಷಾವ್ಯತಿಕ್ರಮಃ'—ದಶರೂಪ.

153 ಕ ಇಹ ಭವೇನ್ನಿಹತೇಷು ಕೀಚಕೇಷು—ಭೀಮನೂ ಕೀಚಕರೂ ಸಮಾನ ಬಲರೆಂಬುದು ಸುಪ್ರಸಿದ್ಧ. ಅಭಿಮನ್ಯುವಿನ ಬಲವೂ ಸ್ವಲ್ಪ ಕಮ್ಮಿ ಅಷ್ಟೇ ಇತ್ತು. ಆದ್ದರಿಂದ ವಿರಾಟನ ಕಡೆಯಿಂದ ಅವನನ್ನು ತಡೆದು ಬಂಧಿಸಲು ಶಕ್ತರಾಗಿದ್ದವರು ಕೀಚಕರು ಮಾತ್ರ. ಅವರು ಈಗಾಗಲೇ ಹತರಾಗಿಬಿಟ್ಟಿದ್ದರು. ಆದ್ದರಿಂದ ಇಂತಹ ಸಮರ್ಥಶಾಲಿ ಯಾರಿರಬಹುದು?—ಎಂಬ ಬೃಹನ್ನಳೆಯ ಆತ್ಮಗತ ಪ್ರಶ್ನೆಯಲ್ಲೇ 'ಭೀಮನೇ ಅಂತಹವನು' ಎಂಬ ಉತ್ತರವೂ ಸೇರಿಕೊಂಡಿದೆಯೆಂಬುದನ್ನು ಗಮನಿಸಿ. ಮುಂದಿನ 157ರಥಮಾಸಾದ್ಯ...ಎಂಬುದೂ ಇದೇ ಅಂಶವನ್ನು ಸಮರ್ಥಿಸುತ್ತದೆ; ಮತ್ತು 159 ಅದನ್ನು ವಾಚ್ಯವಾಗಿಯೇ ತಿಳಿಸಿಬಿಡುತ್ತದೆ.

163 ವೃಷ್ಣಿಪಾಂಡವನಾಥಸ್ಯ—ವೃಷ್ಣಯಃ ಪಾಂಡವಾಶ್ಚ ನಾಥಾಃ ಯಸ್ಯ। ಮುಂದೆ iii 14ರಲ್ಲಿ ಅಭಿಮನ್ಯುವನ್ನು 'ಬಹುನಾಥಃ ಖಲು ಸೌಭದ್ರಃ' ಎಂದೂ ನಿರೂಪಿಸಲಾಗಿದೆ.

164 ಯಾದವೀಪುತ್ರಃ—ಸುಭದ್ರೆಯ ಮಗ; ಅಭಿಮನ್ಯು.

165 ಪುತ್ರೋ ಹ್ಯೇಷ ಯುಧಿಷ್ಠಿರಸ್ಯ ಚ—ಅಭಿಮನ್ಯು ಅರ್ಜುನನಿಗೆ ಸುಭದ್ರೆಯಲ್ಲಿ ಜನಿಸಿದ ಮಗನಾಗಿದ್ದರೂ ಒಬ್ಬೊಬ್ಬ ಪಾಂಡವನೂ ಅವನನ್ನು ತನ್ನ ಮಗನೆಂದೇ ಭಾವಿಸಿ

ಕೊಂಡಿದ್ದುದರಿಂದ ವಿರಾಟನ ಈ ಮಾತು ಸಮಂಜಸವಾಗಿಯೇ ಇವೆ. ಈ ಶ್ಲೋಕದಲ್ಲಿ ಆರು ಕಾರಣಗಳನ್ನು ಉಲ್ಲೇಖಿಸಿ 'ನಾವಧೀರಣಮರ್ಹತಿ ಯಾದವೀಪುತ್ರಃ' ಎಂಬ ತನ್ನ ಮಾತನ್ನು ವಿರಾಟ ಸಮರ್ಥಿಸಿಕೊಂಡಿದ್ದಾನೆ. ಆ ಕಾರಣಗಳು—(1) ಪುತ್ರೋ ಹ್ಯೇಷ ಯುಧಿಷ್ಠಿರಸ್ಯ (2) ವಯಸ್ತುಲ್ಯಂ ಹಿ ನಃ ಸೂನುನಾ (3) ಸಂಬಂಧೋ ದ್ರುಪದೇನ ನಃ ಕುಲಗತಃ ನಪ್ತಾಹಿ ತಸ್ಮಾದ್ಭವೇತ್ (4) ಜಾಮಾತೃತ್ವಮುದೂಢತೋಽಪಿ ಚ ಭವೇತ್ ಕನ್ಯಾಪಿತೃತ್ವಂ ಹಿ ನಃ (5) ಪೂಜಾರ್ಹೋಽಪ್ಯತಿಥಿಃ ಭವೇತ್ (6) ಸ್ವವಿಭವೈಃ ಇಷ್ಟಾ ಹಿ ನಃ ಪಾಂಡವಾಃ.

166 ವಕ್ತವ್ಯಂ=ನಿಂದೆ, ಅಪವಾದ (163 ಪೂಜಾಂ ಭಯಾದಿತಿ ಎಂಬಲ್ಲಿರುವ). ಇದೇ ಅರ್ಥದಲ್ಲಿ ಪ್ರತಿಮಾ III 6ರಲ್ಲೂ 'ವಕ್ತವ್ಯಂ ಕಿಂಚಿದಸ್ಮಾಸು....'.

168 ಬೃಹನ್ನಳಯಾ ಪ್ರವೇಶಯಿತವ್ಯಃ—ಇದಕ್ಕೆ ಕಾರಣವನ್ನು ಮುಂದೆ ಭಗವಾನನ ಆತ್ಮಗತ ವಾಕ್ಯ 17೧ರಲ್ಲಿ ಕಾಣಬಹುದು.

171 ಲಜ್ಜತೇ ಹ್ಯೇಷ ಪುತ್ರಂ—ಲಜ್ಜತೇ ಎಂಬುದು ಇಲ್ಲಿ ಸಕರ್ಮಕವಾಗಿ ಪ್ರಯೋಗಿಸಲ್ಪಟ್ಟಿದೆ. ಲಜ್ಜ್—ಅಕರ್ಮಕಧಾತು.

174 ಭೀಷ್ಮಾದಿಗಳ ಹಿಂದಿರುಗುವಿಕೆ, ಅಭಿಮನ್ಯುವಿನ ಸೆರೆ ಇವುಗಳು ತನ್ನ ಮಗನ ಪರಾಕ್ರಮದ ಫಲ ಎಂದು ವಿರಾಟ ಪಿತೃಸಹಜವಾದ ಅಭಿಮಾನದಿಂದ ಹೇಳಿಕೊಳ್ಳುವುದರಲ್ಲಿರುವ ವಿಡಂಬನೆಯನ್ನು ಗಮನಿಸಿ. ಎಲ್ಲವನ್ನೂ ಚೆನ್ನಾಗಿ ಬಲ್ಲ ಭಗವಾನನ ಜತೆಯಲ್ಲೇ ವಿರಾಟ ಹೀಗೆ ಹೆಮ್ಮೆಪಟ್ಟುಕೊಳ್ಳುವುದರಲ್ಲಿ ಹಾಸ್ಯವಿಡಂಬನೆಯಿದೆ.

176 ಭೀಮಸೇನಃ—ಉದ್ದಕ್ಕೂ ಯುಧಿಷ್ಠಿರನನ್ನೂ ಅರ್ಜುನನನ್ನೂ ಭಗವಾನ್ ಮತ್ತು ಬೃಹನ್ನಳೆ ಎಂದು ಅವರು ಅಜ್ಞಾತವಾಸಕಾಲದಲ್ಲಿ ತಾಳಿದ್ದ ಹೆಸರುಗಳಿಂದ ನಿರ್ದೇಶಿಸಿ, ಭೀಮನ ವಿಷಯದಲ್ಲಿ ಮಾತ್ರ ಅವನ ಸರಿಯಾದ ಹೆಸರಿನಿಂದಲೇ ವ್ಯವಹರಿಸಿರುವುದರಲ್ಲಿ ಔಚಿತ್ಯವಿಲ್ಲ. ಆದೀಪಿತೇ ಜತುಗೃಹೇ—ದುರ್ಯೋಧನನು ಪಾಂಡವರನ್ನು ಅರಗಿನ ಮನೆಯಲ್ಲಿಟ್ಟು, ಅದಕ್ಕೆ ಬೆಂಕಿ ಹೊತ್ತಿಸಿದಾಗ ನಡೆದ ಪ್ರಕರಣ ಇದು. ಆಗ ಭೀಮ ತನ್ನ ನಾಲ್ಕು ಸೋದರರನ್ನೂ ತಾಯಿ ಕುಂತಿಯನ್ನೂ ಒಟ್ಟಿಗೇ ಎತ್ತಿಕೊಂಡು ಉರಿಯುವ ಅರಗಿನ ಮನೆಯಿಂದ ಹೊರಕ್ಕೆ ಬಂದಿದ್ದ. (ಮಹಾಭಾರತ ಆದಿಪರ್ವ ಅಧ್ಯಾಯ 148). ಭೀಮನಿಗೆ ಆಗ ಆದ ಶ್ರಮವೂ ಈಗ ಒಬ್ಬನೇ ಒಬ್ಬ ಹುಡುಗ ಅಭಿಮನ್ಯುವನ್ನು ಎತ್ತಿಕೊಂಡು ಬರುವಾಗ ಆದ ಶ್ರಮವೂ ಸಮವಾಗಿತ್ತೆಂದು ಅವನೇ ಹೇಳಿಕೊಂಡು ಅಭಿಮನ್ಯುವಿನ ದೇಹದಾರ್ಢ್ಯ ಎಂತಹುದೆಂಬುದನ್ನು ಪರ್ಯಾಯವಾಗಿ ಇಲ್ಲಿ ನಿರೂಪಿಸಿದ್ದಾನೆ.

181 ತನಿಮಾರ್ಜಿತೋದರಃ=ತನಿಮ್ನಾ ಅರ್ಜಿತಂ (ಸಂಪಾದಿತರಾಮಣೀಯಕಂ) ಉದರಂ ಯಸ್ಯ ಸಃ | ಸ್ಥಿರೋನ್ನತಾಂಸೋರುಮಹಾನ್—ಸ್ಥಿರೌಚ ಉನ್ನತೌ ಚ

ಅಂಸೌ "ಯಸ್ಯ ಸಃ, ಸ್ಥಿರೋನ್ನತಾಂಸಃ। ಊರ್ವೋಃ ಮಹಾ—ಊರುಮಹಾ ಸ್ಥಿರೋನ್ನತಾಂಸಶ್ಚ ಊರುಮಹಾಂಶ್ಚ ಸ್ಥಿರೋನ್ನತಾಂಸೋರುಮಹಾ। ಊರು ಮಹಾ ಕಟೇಕೃಶಃ—ಇದು ಧೃಢಕಾಯನಾದವನ ಸರಿಯಾದ ಸ್ವರೂಪ. ಇದರೊಡನೆ ಅರ್ಜುನನ ವರ್ಣನೆಯಲ್ಲಿ ಮುಂದೆ ಬರುವ 183 ಲಘುಶ್ಚ ವೇಷೇಣ ಮಹಾ ಇವ ಓಜಸಾ ಎಂಬುದನ್ನು ಪರಿಶೀಲಿಸಿ.

183 ಕರೇಣುಃ—ಕೇ (ಮಸ್ತಕೇ) ರೇಣುಃ ಯಸ್ಯಾಃ ಸಾ; ಹೆಣ್ಣಾನೆ. ಶೋಭಾಭಿಃ= ಒಡವೆಗಳಿಂದ.

184 ಅಪವಾರ್ಯ=ಏಕಾಂತವಾಗಿ, cf. ರಹಸ್ಯಂ ಕಥ್ಯತೇऽನ್ಯಸ್ಯ ಪರಾವೃತ್ತ್ಯಾऽಪವಾರಿತಂ। ಆರ್ಯೇಣ=ಭವತಾ ಭೀಮಸೇನೇನ, ಮಮ ಅಗ್ರಜೇನ. cf. ಆರ್ಯೇತಿ ಪೂರ್ವಜೋ ಭ್ರಾತಾ ವಾಚ್ಯಃ ಪುತ್ರ ಇವಾನುಜಃ।—ಭರತ 71-82.

185 ಪೂರ್ವಯುದ್ಧೇ=ಮೊಟ್ಟಮೊದಲನೆಯ ಯುದ್ಧದಲ್ಲಿ. ಅಭಿಮನ್ಯು ಇನ್ನೂ ಪ್ರಾಪ್ತವಯಸ್ಕನಾಗಿರಲಿಲ್ಲವಾಗಿ ಆವರೆಗೆ ಅವನು ಯಾವ ಯುದ್ಧದಲ್ಲೂ ಭಾಗಿಯಾಗಿರಲಿಲ್ಲ. ಮೊದಲನೇ ಯುದ್ಧದಲ್ಲೇ ಸೋಲಬಾರದೆಂಬುದು ವೀರನ ಧ್ಯೇಯವಾಗಿರಬೇಕು. ವಸುಭದ್ರ=ವಸುದೇವ. ವಾಸುಭದ್ರಃ—ವಸುಭದ್ರಸ್ಯ ಅಪತ್ಯಂ ಪುಮಾ; ಆದ್ದರಿಂದ ವಾಸುಭದ್ರ=ವಾಸುದೇವ; ಕೃಷ್ಣ. ರುಷ್ಯತೇ—ರುಷ್ (ಪರಸ್ಮೈ) ಧಾತುವಿನ ಆತ್ಮನೇ ಪದ ಪ್ರಯೋಗ ಆರ್ಷ.

186-87 ಇಲ್ಲಿ ಭೀಮನು ಅಗಿನ ಸನ್ನಿವೇಶವನ್ನೂ ತಾವಿನ್ನೂ ಅಜ್ಞಾತವಾಸದಲ್ಲಿರುವರೆಂಬುದನ್ನೂ ಮರೆತುಬಿಟ್ಟು ಬೃಹನ್ನಳೆಯನ್ನು (ಏಕಾಂತವಾಗಿ ಅಲ್ಲ) ಪ್ರಕಾಶವಾಗಿಯೇ 'ಅರ್ಜುನ' ಎಂದು ಸಂಬೋಧಿಸಿಬಿಡುತ್ತಾನೆ. ಆದರೆ ಜಾಗರೂಕನಾದ ಅರ್ಜುನ ಅಷ್ಟರಲ್ಲೇ ಮಧ್ಯೆ ಬಾಯಿಹಾಕಿ ಅದನ್ನೂ 187ರಲ್ಲಿ ಮರೆಯಿಸುತ್ತಾ 'ಹೌದು ಹೌದು। ಅರ್ಜುನ ಪುತ್ರ ಇವನು' ಎಂದು ಹೇಳಿ ಪರ್ಯಾಯವಾಗಿ ಭೀಮಸೇನನಿಗೆ ಅವನ ಅಜಾಗರೂಕತೆಯನ್ನು ನೆನಪಿಗೆ ತಂದುಕೊಡುತ್ತಾನೆ. ಆದ್ದರಿಂದಲೇ ಮುಂದೆ 188ರಲ್ಲಿ ಭೀಮ ಅಪವಾರಿತವಾಗಿ ಅರ್ಜುನನೊಡನೆ ಮಾತಾಡುವುದು.

191 ಅಭಿಮನ್ಯು ರಾಜಕುಮಾರ. ಆದರೂ ಅವನನ್ನು ಭೀಮನು ಹೆಸರು ಹಿಡಿದು ಮಾತಾಡಿಸಿದುದು ಅವನನ್ನು ಕೆರಳಿಸುತ್ತದೆ. ರಾಜಕುಮಾರನನ್ನು ಸಂಬೋಧಿಸುವ ಬಗೆ ಭರತನ ನಾಟ್ಯಶಾಸ್ತ್ರದಲ್ಲಿ ಹೇಳಿದೆ—"ಸ್ವಾಮಿಾ ತು ಯುವರಾಜಸ್ತು ಕುಮಾರೋ ಭರ್ತೃದಾರಕಃ। ಸೌಮ್ಯ ಭದ್ರಮುಖೇತ್ಯೇವಂ......"17-75.

192 ರುಷ್ಯತಿ—ಇದೇ ರುಷ್ ಧಾತು ಹಿಂದೆ 185ರಲ್ಲಿ ಆತ್ಮನೇ ಪದವಾಗಿ ಪ್ರಯೋಗಿಸಲ್ಪಟ್ಟಿದೆ.

196 ಇಹಾಯಂ ಸಮುದಾಚಾರಃ ?—ಇದಾವನೇಳೆ ಅಥವಾ ಎಂಬುದು ಅಧ್ಯಾಹಾರ್ಯ.

198 ಭವಾನ್ ಧರ್ಮರಾಜಃ ಕಿಂ? ಭೀಮಸೇನೋ(ವಾ)? ಧನಂಜಯೋ(ವಾ)? ಯತ್ ಮೇ ಪಿತೃವತ್ ಮಾಂ ಆಕ್ರಮ್ಯ ಸ್ತ್ರೀಗತಾಂ ಕಥಾಂ ಪೃಚ್ಛಸೇ?—ಇಲ್ಲಿ ಪೃಚ್ಛಸೇ ಕ್ರಿಯಾಪದ; ಕರ್ತೃಪದ ಭವಾನ್. ಆದರೆ 'ಭವದ್ಯೋಗೇ ನ ಮಧ್ಯಮಃ' ಎಂಬ ಸೂತ್ರದ ಪ್ರಕಾರ ಭವಾನ್ ಎಂಬುದು ಕರ್ತೃಪದವಾಗಿದ್ದಾಗ ಕ್ರಿಯೆ ಮಧ್ಯಮ ಪುರುಷದಲ್ಲಿರಕೂಡದು. ಭವಾನ್ ಪ್ರಚ್ಛಸೇ ಎಂಬುದು ವ್ಯಾಕರಣ ವಿರುದ್ಧ. 'ಭವಾನ್ ಪೃಚ್ಛತಿ' ಎಂದಿರಬೇಕು. ಪೃಚ್ಛಸೇ ಎಂಬ ಆತ್ಮನೇ ಪದರೂಪವೂ ಅಪಾಣಿನೀಯ. ಪೃಚ್ಛಸಿ, ಎಂದು ಪರಸ್ಮೈಪದರೂಪದಲ್ಲಿರಬೇಕು. ಇದೂ ಅಲ್ಲದೆ ಇಲ್ಲಿ ಅಭಿಮನ್ಯುವಿನ ಈ ಉತ್ತರ ಬೃಹನ್ನಳೆಯ 'ಸುಖಮಾಸ್ತೇ ತೇ ಜನನೀ?' ಎಂಬ ಪ್ರಶ್ನೆಗೆ. ಆದ್ದರಿಂದ ಬೃಹನ್ನಳೆಯನ್ನು ಕುರಿತ ಭವಾನ್ ಎಂಬ ಪುಲ್ಲಿಂಗ ಶಬ್ದವೂ ಇಲ್ಲಿ ಅಸಂಗತ. ಮುಂದಿನ 200ರಲ್ಲಿ 'ಕುಶಲೀ ಭವತಾ ಸಂಸ್ಪೃಷ್ಟಃ' ಎಂದೂ ಹಿಂದೆ 181ರಲ್ಲಿ ಬೃಹನ್ನಳೆಯ ವೇಷದಲ್ಲಿದ್ದ ಅರ್ಜುನನನ್ನು ಕಂಡಾಗಲೇ 'ಅಯೇ, ಅಯಮಪರಃ ಕಃ?' ಎಂದೂ ಪುಲ್ಲಿಂಗದಲ್ಲೇ ಬೃಹನ್ನಳೆಯನ್ನು ಕುರಿತ ನಿರ್ದೇಶವಿದೆ.

203 ಕಥಮ್ ಇದಾನೀಂ (ಯುವಾಭ್ಯಾಂ) ಸಾವಜ್ಞಂ ಇವ ಮಾಂ (ಉದ್ದಿಶ್ಯ) ಹಸ್ಯತೇ? ಇಲ್ಲಿ 'ಹಸ್ಯತೇ' ಭಾವೇಪ್ರಯೋಗವಲ್ಲಿದೆ.

207 ಯೌಧ=ಯೋಧ. ನ ಕಶ್ಚಿದಪಿ ಅವಿದ್ಧಃ—ಒಂದೇ ವಾಕ್ಯದಲ್ಲಿ ಎರಡು ನಿಷೇಧಾರ್ಥಗಳನ್ನು ಪ್ರಯೋಗಿಸುವುದು ಭಾಸನಲ್ಲಿ ಹೆಚ್ಚು. ಹಿಂದೆ II 22b ನೋಡಿ. ಅಹಮಪಿಚ...ರಥಃ ಸ್ಯಾತ್—ಈ ಉತ್ತರಾರ್ಧದೊಡನೆ II 27ನ್ನೂ ಪರಿಶೀಲಿಸಿ.

208 ಕಿಮರ್ಥಂ ತೇನ...—ಭೀಮ ಅಲ್ಲೇ ಇರುವುದರಿಂದ ತೇನ ಪದಾತಿನಾ=ಅನೇನ ಪದಾತಿನಾ.

209 ನ್ಯಸ್ತಶಸ್ತ್ರಂ ಹಿ ಕೋ ಹನ್ಯಾತ್?—ಎಂತಹವರನ್ನು ಕೊಲ್ಲಕೂಡದು ಎಂಬುದಕ್ಕೆ ಮನು vii, 91-3 ನೋಡಿ—'ನ ಚ ಹನ್ಯಾತ್ ಸ್ಥಲಾರೂಢಂ ನ ಕ್ಲೀಬಂ ನ ಕೃತಾಂಜಲಿಂ। ನ ಮುಕ್ತಕೇಶಂ ನಾಸೀನಂ ನ ತವಾಸ್ಮೀತಿವಾದಿನಂ॥ ನ ಸುಪ್ತಂ ನ ವಿಸನ್ನಾಹಂ ನ ನಗ್ನಂ ನ ನಿರಾಯುಧಂ। ನಾಯುಧ್ಯಮಾನಂ ಪಶ್ಯಂತಂ ನ ಪರೇಣ ಸಮಾಗತಂ॥ ನಾಯುಧವ್ಯಸನಪ್ರಾಪ್ತಂ ನಾರ್ತಂ ನಾತಿಪರಿಕ್ಷತಂ। ನ ಭೀತಂ ನ ಪರಾವೃತ್ತಂ ಸತಾಂ ಧರ್ಮಮನುಸ್ಮರನ್॥

217 ಸ್ವಪಕ್ಷೇ (ವರ್ತಮಾನಾಂ) ದಯಾಂ, ಧನುಷಿ (ವರ್ತಮಾನಂ) ಜಯಂ, ಪಿತರಿ (ವರ್ತಮಾನಾನ್) ಗುಣಾನ್—I[14] ಮತ್ತು II[66]ರ ಟಿಪ್ಪಣಿ ನೋಡಿ.

೨೨೩ ೨೨೬ ಈ ಎರಡು ಶ್ಲೋಕಗಳಲ್ಲಿರುವ ಭಾವ ಭಾಸರಚಿತ ಮಹಾಭಾರತ ರೂಪಕಗಳಲ್ಲಿ ಪದೇ ಪದೇ ಬರುತ್ತದೆ. cf. (1) ದ್ವಾವೇವ ದೋರ್ಭ್ಯಾಂ ಸಮರೇ ಪ್ರಯಾತೌ...। ಪಂಚರಾತ್ರ iii 14. (2) ಅಯಂ ತು ದಕ್ಷಿಣೋ ಬಾಹುಃ ಆಯುಧಂ ಸಹಜಂ ಮಮ—ಮಧ್ಯಮವ್ಯಾಯೋಗ 42. (3) ವಯಮಪಿ ಚ ಭುಜಾಯುಧ ಪ್ರಧಾನಾಃ....(ಅವಿಮಾರಕ II). (4) ಗಿರಿತಟಕಠಿನಾಂಸಾವೇವ ಬಾಹೂ ಮಮೈತೌ ಪ್ರಹರಣಮಪರಂ ತು ತ್ವಾದೃಶಾಂ ದುರ್ಬಲಾನಾಂ—ಬಾಲಚರಿತ III 11. ಈ ವಾಕ್ಯಗಳಲ್ಲಿ ಭಾಸ ಮಹಾಭಾರತದಲ್ಲಿರುವುದನ್ನೇ ಬಳಸಿಕೊಂಡಿದ್ದಾನೆ. ಸಭಾಪರ್ವ, ಅಧ್ಯಾಯ 23 ನೋಡಿ—(1) ತತಸ್ತೌ ನರಶಾರ್ದೂಲೌ ಬಾಹುಶಸ್ತ್ರೌ ಸಮೀಯತುಃ। ಮತ್ತು (2) ಪರ್ವತೌ ಮೇಘಸಂಕಾಶೌ ಬಾಹುಪ್ರಹರಣಾವುಭೌ॥

ತಸ್ಯೈತತ್ ಸದೃಶಂ ವಚಃ— ಇದೇ ಅರ್ಥದ ಮಾತನ್ನೇ ಮಧ್ಯಮ ವ್ಯಾಯೋಗದಲ್ಲಿ ಘಟೋತ್ಕಚ ಹೇಳುತ್ತಾನೆ—ಇದಮುಪಪನ್ನಂ ಪಿತುರ್ಮೇ ಭೀಮಸೇನಸ್ಯ. ಮಧ್ಯಮ ಸ್ತಾತಃ—ಭೀಮನನ್ನು ಭಾಸ ಇತರ ಕಡೆಗಳಲ್ಲೂ ಮಧ್ಯಮ ಪಾಂಡವನೆಂದೇ ವ್ಯವಹರಿಸುತ್ತಾನೆ. (ಪೀಠಿಕೆ ಪುಟ 41 ನೋಡಿ).

೨೨೭ ನನು ಅನುತ್ತರಾ ವಯಂ ಬ್ರಾಹ್ಮಣೇಷು—ಅಭಿಮನ್ಯುವಿಗೆ ಬ್ರಾಹ್ಮಣರ ವಿಷಯದಲ್ಲಿದ್ದ ಭಕ್ತಿ ಆದರಗಳಿಗೆ ಈ ಮಾತು ನಿದರ್ಶನ. ಅನುತ್ತರಾಃ—ನ ವಿದ್ಯತೇ ಉತ್ತರಂ ಯೇಷಾಂ ತೇ.

೨೩೦ ಈ ಪ್ರಕರಣಕ್ಕೆ ಮಹಾಭಾರತ ಸಭಾಪರ್ವ ಅಧ್ಯಾಯ 5–6 ನೋಡಿ—ಏವ ಮುಕ್ತಸ್ತದಾ ಭೀಮೋ ಜರಾಸಂಧಮರಿಂದಮಃ। ಉತ್ಕ್ಷಿಪ್ಯ ಭ್ರಾಮಯಾಮಾಸ ಬಲವಂತಂ ಮಹಾಬಲಃ। ಭ್ರಾಮಯಿತ್ವಾ ಶತಗುಣಂ ಜಾನುಭ್ಯಾಂ ಭರತರ್ಷಭ। ಬಭಂಜ ಪೃಷ್ಠಂ ಸಂಕ್ಷಿಪ್ಯ ನಿಷ್ಪಿಷ್ಯ ವಿನನಾದ ಚ॥ ಅಸಹ್ಯಕರ್ಮ ತತ್ ಕೃತ್ವಾ—ಇಲ್ಲಿ ಹೇಳಿರುವ ಅಸಹ್ಯಕರ್ಮ ಜರಾಸಂಧನ ಸಂಹಾರ. ಕೃಷ್ಣನು ಮಾಡಬೇಕಾಗಿದ್ದುದನ್ನು ಬಹಳ ಮುಂಚಿತವಾಗಿ ಭೀಮನೇ ಸಾಧಿಸಿಬಿಟ್ಟದ್ದರಿಂದ 'ನೀತಃ ಕೃಷ್ಣೋಽತದರ್ಹತಾಂ' ಎಂದು ಭಾಸ ಇಲ್ಲಿ ಹೇಳಿರುವುದು. ಅತದರ್ಹತಾಂ=ಜರಾಸಂಧವಧಾನರ್ಹತ್ವಂ. ಜರಾಸಂಧನ ಹೆಣ್ಣುಮಕ್ಕಳನ್ನು ಮದುವೆಯಾಗಿದ್ದ ಕಂಸನನ್ನು ಕೃಷ್ಣ ವಧಿಸಿದ್ದುದರಿಂದ ಜರಾಸಂಧ ಯಾದವರೆಲ್ಲರನ್ನೂ ನಿರ್ಮೂಲವಾಗಿ ನಾಶಮಾಡಲು ಪ್ರತಿಜ್ಞೆ ಮಾಡುತ್ತಾನೆ—'ಅಯಾದವೀಂ ಮಹೀಂ ಕರ್ತುಂ ಚಕ್ರೇ ಪರಮಮುದ್ಯಮಂ'—ಭಾಗವತ x 50–3. ಹೀಗೆ ಕೃಷ್ಣನಮೇಲಿನ ದ್ವೇಷದಿಂದ ಜರಾಸಂಧ 18 ಬಾರಿ ಮಧುರೆಗೆ ಮುತ್ತಿಗೆ ಹಾಕುತ್ತಾನೆ. ವಿಧಿಯಿಲ್ಲದೆ ಕೃಷ್ಣ ಕೊನೆಗೆ ದ್ವಾರಕೆಗೆ ಹೋಗಿ ನೆಲಸಬೇಕಾಗುತ್ತದೆ. ಕೃಷ್ಣನೇ ಜರಾಸಂಧನ ವಧೆಗಾಗಿ ಸಮಯ ಸಾಧಿಸುತ್ತಿರುವಷ್ಟರಲ್ಲಿ, ಭೀಮ ಅವನನ್ನು ಕೈಯಿಂದೆತ್ತಿ ಅಂತರಿಕ್ಷದಲ್ಲಿ ತಿರುಗಿಸಿ ಬಿಸಾಟು ವಧಿಸಿಬಿಟ್ಟನೆಂಬುದು ಪ್ರಕೃತ ಶ್ಲೋಕದ ಅರ್ಥ.

233 ಬಾಹುಭ್ಯಾಮಾಹೃತಂ ಭೀಮಃ...—ಮುಂದೆ ಬರುವ iii 6 d 'ಭೀಮಸ್ತ್ರೀನ-ಮಿಹಾನಯೇತ್ ಸ ಬಲವಾನ್ ಹತ್ವಾ ರಿಪೂನೂರ್ಜಿತಾನ್' ಎಂಬುದರೊಡನೆ ಪರಿಶೀಲಿಸಿ.

249 ಯತ್ತತ್ ದ್ವಾದಶವರ್ಷಾಂತೇ...—$I^{114}$ರ ಟಿಪ್ಪಣಿ ನೋಡಿ. ಸವರ್ಣತಾಂ—ಶರೀರಸ್ಯ ಅನ್ಯಭಾಗೇಷು ಯೋ ವರ್ಣಃ ತತ್ಸದೃಶವರ್ಣತಾಂ.

252 ರುದ್ರಬಾಣಾವಲೀಢಾಂಗಂ—ಅರ್ಜುನನ ಈ ವಿಶೇಷಣ ಅವನಿಗೂ ಕಿರಾತರೂಪಿ ರುದ್ರನಿಗೂ ಹಿಂದೆ ಯುದ್ಧ ಸಂಭವಿಸಿದುದನ್ನು ಸೂಚಿಸುತ್ತದೆ.

253 ಪ್ರವಿಶ ತ್ವಮಭ್ಯಂತರಂ—ಬೃಹನ್ನಳೆಯು ಅರ್ಜುನನೇ ಆಗಿದ್ದರೂ, ಇನ್ನೂ ಪಾಂಡವರ ಅಜ್ಞಾತವಾಸ ಮುಗಿದಿಲ್ಲವೆಂದೇ ಭಾವಿಸಿದ್ದ ವಿರಾಟ ಸ್ತ್ರೀರೂಪಿ ಬೃಹನ್ನಳೆಗೆ—'ಒಳಕ್ಕೆ ಅಂತಃಪುರಕ್ಕೆ ಹೋಗು' ಎಂದು ಹೇಳಿರುವುದು ಸರಿ. ಇದೇ ವಾಕ್ಯ ಭಾಸನ ಅವಿಮಾರಕ vi, ಬಾಲಚರಿತ i, ಸ್ವಪ್ನ vi, ಅಭಿಷೇಕ i, ಪ್ರತಿಜ್ಞಾ iiರಲ್ಲೂ ಬರುತ್ತದೆ.

255 ತೀರ್ಣಪ್ರತಿಜ್ಞಾ ವಯಂ—ಇದರೊಡನೆ 'ಶಂಕೇ ತೀರ್ಣಾ ಪ್ರತಿಜ್ಞೇತಿ ಸ್ಮಾರಣಾ ಕ್ರಿಯತೇ ಮಮ $ii^{70}$ ಎಂಬ ಭಗವಾನನ ಮಾತನ್ನು ಪರಿಶೀಲಿಸಿ.

259 ಸ್ವಂತಂ—ಶೋಭನಃ ಅಂತಃ ಯಸ್ಯ ತತ್ (ಶುಭವಾಗಿ ಕೊನೆಗೊಂಡದ್ದು); ಗೋಗ್ರಹಣಕ್ಕೆ ವಿಶೇಷಣ.

262 ಪಿತೃಸದೃಶ ಪರಾಕ್ರಮೋ ಭವ—ಇದು $I^{90}$ರಲ್ಲಿರುವುದೇ.

267 ಯಸ್ತ್ರಯೋದಶವರ್ಷಾಂತೇ—ಹಿಂದೆ $I^{169}$ ಮತ್ತು $II^{249}$ರಲ್ಲಿ ದ್ವಾದಶ ವರ್ಷಾಂತೇ ಎಂದೇ ಹೇಳಿರುವುದರಿಂದ ಇಲ್ಲೂ ಪಾಠಾಂತರದಲ್ಲಿರುವಂತೆ 'ಯತ್ತದ್ ದ್ವಾದಶವರ್ಷಾಂತೇ' ಎಂಬುದೇ ಗ್ರಾಹ್ಯ.

272 ಉತ್ತರಾಸನ್ನಿಕರ್ಷಃ—(ಅರ್ಜುನಸ್ಯ) ಉತ್ತರಯಾ ಸಹ (ವಿಕವಾರ್ಷಿಕಃ) ಸನ್ನಿಕರ್ಷಃ। ಇಲ್ಲಿ ಪಾಠಾಂತರದಲ್ಲಿರುವಂತೆ ಕೋऽತ್ರ ಎಂಬುದಕ್ಕೆ ಮುಂಚೆ ಪ್ರಕಾಶಂ ಎಂಬ ರಂಗಸೂಚನೆ ಅವಶ್ಯಕ.

274-75 ಆಪಸ್ನಾತವತ್—ಭಾಸನ ನಾಟಕಗಳಲ್ಲಿ ರಂಗಮಂಚದ ಮೇಲಕ್ಕೇ ನೀರು ತರುವುದು, ಆಚಮನ ಮಾಡುವುದು ಪ್ರಾಯಃ ಇದ್ದೇ ಇರುತ್ತದೆ. ಅಂತಹ ಕಡೆಗಳಲ್ಲಿ 'ನಿಷ್ಕ್ರಮ್ಯ ಪ್ರವಿಶ್ಯ' ಎಂಬ ರಂಗಸೂಚನೆಯೂ ಇದ್ದೇಇರುತ್ತದೆ. ಮೇಲಿನ $I^{106-09}$ರ ಟಿಪ್ಪಣಿಯನ್ನೂ ಪ್ರತಿಜ್ಞಾ i; ಪ್ರತಿಮಾ ii, iv; ಅಭಿಷೇಕ; ಮಧ್ಯಮ ವ್ಯಾಯೋಗ ಮತ್ತು ದೂತವಾಕ್ಯಗಳನ್ನು ನೋಡಿ.

276-79 ಮಹಾಭಾರತದಲ್ಲಿ ವಿರಾಟಪರ್ವದ 71–72 ನೇ ಅಧ್ಯಾಯಗಳಲ್ಲಿ ಬರುವ ಪ್ರಸಂಗವನ್ನೇ ಭಾಸ ಇಲ್ಲಿ ತುಂಬ ಸಂಗ್ರಹವಾಗಿ ಆದರೆ ಪರಿಣಾಮಕಾರಿಯಾಗಿ ನಿರೂಪಿಸಿದ್ದಾನೆ.

280 ಇಲ್ಲಿನ ಪಾಠಾಂತರವೇ ಗ್ರಾಹ್ಯ. (ಮುಂದೆ $iii^{60-69}$ರಲ್ಲಿ ಉತ್ತರನೇ ಹೇಳಿರುವಂತೆ) ಯುಧಿಷ್ಠಿರ ಅವನನ್ನು ಪಿತಾಮಹನ ಬಳಿಗೆ ಕಳುಹಿಸುವ ಸನ್ನಿವೇಶ ಇದು.

## ಅಂಕ ೩

[1] ಈಗ ಪ್ರವೇಶಿಸುವವನು ಅಭಿಮನ್ಯುವಿನ ಸೂತ.

[2] ಸರ್ವಕ್ಷತ್ರಾಚಾರ್ಯಪುರೋಗಾಣಾಂ—ಸರ್ವೇಷಾಂ ಕ್ಷತ್ರಾಣಾಂ (=ಕ್ಷತ್ರಿಯಾಣಾಂ) ಆಚಾರ್ಯಃ (=ದ್ರೋಣಃ) ಪುರೋಗಃ ಯೇಷಾಂ ತೇಷಾಂ.

[3] ಚಿರಪ್ರನಷ್ಟಾನ್—ಬಹಳಕಾಲದಿಂದ ಪತ್ತೆಯಿಲ್ಲದ. ಹಿಂದೆ i [11] ರಲ್ಲಿ ಹೇಳಿರುವುದು 'ಸಂವತ್ಸರೈಃ ದ್ವಾದಶಭಿಃ ನ ದೃಷ್ಟಾಃ' ಎಂದು. ಆದ್ದರಿಂದ ಈ ನಾಟಕದ ಪ್ರಕಾರ ಪಾಂಡವರ ವನವಾಸ ಮತ್ತು ಅಜ್ಞಾತವಾಸ ಎರಡೂ ಸೇರಿ ಹನ್ನೆರಡು ವರ್ಷಗಳೆಂದು ಹೇಳೋಣವೆಂದರೆ ii [207] ರಲ್ಲಿ 'ಯಸ್ತ್ರಯೋದಶವರ್ಷಾಂತೇ ಎಂದು ಅರ್ಜುನನೇ ಹೇಳಿರುವ ಮಾತಿನೊಡನೆ ಹೊಂದಿಕೊಳ್ಳುವುದಿಲ್ಲ. ಅರ್ಜುನನ ಈ ವಾಕ್ಯದ ಪಾಠಾಂತರವನ್ನು ಅಂಗೀಕರಿಸಿಬಿಟ್ಟರೆ ಈ ತೊಡಕು ಪರಿಹಾರವಾಗುತ್ತದೆ. ii [207] ಟಿಪ್ಪಣಿ ನೋಡಿ.

[6] ಪುರುಷಸಾರಂ—ಪುರುಷಸ್ಯ ಸಾರಂ; ಅಭಿಮನ್ಯುವನ್ನು ಎತ್ತಿಕೊಂಡುಹೋದ ಪುರುಷನ ಶಕ್ತಿಯನ್ನು; ಕಥಯ ಎಂಬುದರ ಕರ್ಮಪದ. ಬಲವತಃ—ದ್ವಿತೀಯಾ ಬಹುವಚನ; ದೂತಾನ್ ಎಂಬುದರ ವಿಶೇಷಣ.

[8] ಭಗ್ನಾಪಯಾನೇಷು—ಭಗ್ನಾನಾಂ (=ಪರಾಭೂತಾನಾಂ) ಅಪಯಾನೇಷು (=ರಣಾತ್ ಪಲಾಯನೇಷು). 'ಭಗ್ನ' ಶಬ್ದವನ್ನು ಭಾಸ 'ಸೋತ' ಎಂಬರ್ಥದಲ್ಲೇ ಬಳಸುತ್ತಿದ್ದಾನೆ. ನೋಡಿ 'ಭಗ್ನಾ ಧ್ವಜೈರೇವ' ii 46; ii 8; ii 12. ತಾರುಣ್ಯಭಾವೇನ—ತರುಣಸ್ಯ ಭಾವಃ ತಾರುಣ್ಯಂ; ಇದರೊಡನೆ ಭಾವ ಶಬ್ದವನ್ನು ಪುನಃ ಸೇರಿಸಿ ಪ್ರಯೋಗಮಾಡುವುದು ಸರಿಯಲ್ಲ. ಹಸ್ತಿಗ್ರಹಣೋದ್ಯತೇನ—ಇಲ್ಲಿ ದುರ್ಯೋಧನನೇ ಹಸ್ತಿ (=ಆನೆ). ಆ ಆನೆಯನ್ನು ಹಿಡಿಯಲು ಬಂದವನಿಂದ (ಯೂಥೇ ಪ್ರಯಾತೇ=) ಆನೆಯ ಹಿಂಡು ಹಿಂದಕ್ಕೆ ಹೊರಟುಹೋಗಲು ಕಲಭಃ ಗೃಹೀತಃ—ಆನೆಯಮರಿ ಅಭಿಮನ್ಯುವು ಹಿಡಿಯಲ್ಪಟ್ಟನು.

[10] ಮೋಕ್ಷಯಾಮಿ—ಇಲ್ಲಿ ಮುಚ್ ಎಂಬ ಧಾತುವಿನ ಅರ್ಥದಲ್ಲೇ ಬಳಸಿರುವುದು 'ಮೋಕ್ಷ' ಎಂಬ ನಾಮಧಾತು.

[12] ಅತಿಸ್ನಿಗ್ಧಮನುರೂಪಂ ಚಾಭಿಹಿತಂ—ಮೇಲೆ [11] ರಲ್ಲಿ ದುರ್ಯೋಧನನಾಡಿದ 'ಸತಿ ಚ ಕುಲವಿರೋಧೇ ನಾಪರಾಧ್ಯಂತಿ ಬಾಲಾಃ' ಎಂಬ ಶ್ಲಾಘ್ಯವಾದ ಮಾತುಗಳನ್ನು ಕೇಳಿ ಸಂತೋಷದಿಂದ ಕರ್ಣ ಹೇಳುವ ಈ ಮಾತೂ ಪ್ರಶಂಸಾರ್ಹವಾದುದು. ಇದೇ ಮಾತು ಸ್ವಪ್ನವಾಸವದತ್ತ iv ರಲ್ಲೂ.

[14] ಬಹುನಾಥಃ ಖಲು ಸೌಭದ್ರಃ—'ಅಭಿಮನ್ಯುವಿಗೆ ಅನೇಕ ರಕ್ಷಕರಿದ್ದಾರೆ.

ನೀನೇ ಹೋಗಿ ಅವನನ್ನು ಬಿಡಿಸಬೇಕಾಗಿಲ್ಲ. ಇಷ್ಟರಲ್ಲೇ ಅವನು ಬಿಡುಗಡೆ ಹೊಂದಿದ್ದಾನೆಂದೇ ತಿಳಿದುಕೋ' ಮುಂತಾಗಿ ಶಕುನಿ ಹೇಳುವಮಾತು ದುರ್ಯೋಧನ ಆ ಕೆಲಸಕ್ಕೆ ಪ್ರವೃತ್ತನಾಗದಿರಲೆಂದು. ತನ್ನ ಮಾತನ್ನೇ ಮುಂದಿನ [15]ರಲ್ಲಿ ಶಕುನಿ ಸಮರ್ಥಿಸಿಕೊಳ್ಳುತ್ತಾನೆ.

16 ದ್ರೋಣ ಇಲ್ಲಿ ಕೇಳುವುದು 'ಕಥಮಿದಾನೀಂ ಗೃಹೀತಃ ?' ಅಭಿಮನ್ಯು ಹೇಗೆ ಹಿಡಿಯಲ್ಪಟ್ಟ ? ಎಂದು. ಅದೇ [8]ರಲ್ಲಿ 'ಕೇನ ಅಪನೀತಃ ?' ಯಾರಿಂದ ಹಿಡಿಯಲ್ಪಟ್ಟ ? ಎಂದು.

17 ರಥದಲ್ಲಿ ಕುಳಿತು ಯುದ್ಧ ಮಾಡುವವರಿಗೆ ದೈವಕೃತವಾಗಿ ಒದಗುವ ವಿಪತ್ತುಗಳಲ್ಲಿ ಅಭಿಮನ್ಯುವಿಗೆ ಒದಗಿದುದು ಯಾವುದು ?—ಎಂದು ದ್ರೋಣ ಸೂತನನ್ನು ಈ ಶ್ಲೋಕದ ಪೂರ್ವಾರ್ಧದಲ್ಲಿ ಕೇಳುತ್ತಾನೆ—1. ಪರ್ಯಸ್ತಃ ಅಸ್ಯ ರಥಃ ? 2. ಹಯಾನು ಚಪಲಾಃ ? 3. ಚಕ್ರಾಕ್ಷಮಾ ಮೇದಿನೀ ? 4. ತೂಣೀ ಕ್ಷೀಣಶರೇ ? 5. ತ್ವಮಸ್ಯ ವಿಗುಣಃ ? 6. ಜ್ಯಾಚ್ಛೇದವಂಧ್ಯಂ ಧನುಃ ?—ದೈವಕೃತವಲ್ಲದ ವಿಪತ್ತೂ ಒಂದುಂಟು. ಅದು ಶತ್ರುವಿಗೆ ಬಾಣಪ್ರಯೋಗ ಮಾಡುವುದರಲ್ಲಿರುವ ಅಧಿಕ ಸಾಮರ್ಥ್ಯ. ಆದರೆ ಅಭಿಮನ್ಯುವಿಗಿಂತ ಯಾರ ಕೈ ಮೇಲಾಗಿದ್ದೀತು. ಅವನು ಸ್ವಾಧೀನ ಶಿಕ್ಷ; ಸುಶಿಕ್ಷಿತ.

19 ನ ಚಾಪಿ ದೋಷಾ ಭವತಾ ಅಭಿಭಾಷಿತಾಃ—ನೀನು ಹೇಳಿದ ದೈವಕೃತದೋಷಗಳಾವುವೂ ಒದಗಲಿಲ್ಲ. ಸ ಚಾಪಿ...ಮಹಾರಥಃ—ಅಭಿಮನ್ಯುವೂ ಬಾಣಗಳ ಸುರಿಮಳೆಯೇ ಆಗಿದ್ದ; ಅಂದರೆ ಶತ್ರುವಿನ ಬಾಣಪ್ರಯೋಗ ಸಾಮರ್ಥ್ಯದಿಂದಲೂ ಅವನು ಸೋಲಲಿಲ್ಲ. ಎದುರಿಲ್ಲದ(ವಿಷ್ಣು) ಚಕ್ರದಂತೆ ಸುತ್ತುತ್ತಿತ್ತು ನನ್ನರಥ. ಮೇಲೆ ಬಿದ್ದುಬಂದ ಒಬ್ಬ ಪದಾತಿಯಿಂದ ಅವನು ಗೃಹೀತನಾದ

25 ಆಪಸ್ಕರೇ=ಅಪಸ್ಕರೇ (ಇದೇ ಸರಿಯಾದ ರೂಪ). cf. (1) ಅಪಸ್ಕರೋ ರಥಾಂಗಂ—ಪಾಣಿನೀ 6-1-149. (2) ಸ್ಯಾದ್ರಥಾಂಗಮಪಸ್ಕರಃ.—ಅಮರ. (3) ರಥಾಂಗಾನಿ ತ್ವಪಸ್ಕರಾಃ—ಹೇಮಚಂದ್ರ. ಚಕ್ರವನ್ನು ಬಿಟ್ಟು ರಥದ ಇತರ ಭಾಗಕ್ಕೆ ರಥಾಂಗವೆಂದು ಹೆಸರು ಎಂಬುದಾಗಿ ಕ್ಷೀರಸ್ವಾಮಿಯ ಮತ.—ರಥಾಂಗಂ ಚಕ್ರಾದನ್ಯತ್. ಪ್ರಸಾರಿತಹಯಗ್ರೀವಃ ರಥಃ ನಿಷ್ಕಂಪಃ ಸ್ಥಿತಃ—ರಥವನ್ನು ವೇಗವಾಗಿ ಎಳೆಯುತ್ತಿದ್ದಾಗ ಕುದುರೆಗಳ ಕುತ್ತಿಗೆ ಮುಂದಕ್ಕೆ ಚಾಚಿಕೊಂಡು ಉದ್ದವಾಗಿ ಕಾಣುವುದು ಸಹಜ. ಅಷ್ಟು ವೇಗದಿಂದ ಕುದುರೆಗಳು ಎಳೆಯುತ್ತಿದ್ದರೂ ಭೀಮ ರಥಕ್ಕೆ ಕೈ ಒತ್ತಿ ತಡೆದಕೂಡಲೇ ರಥ ನಿಶ್ಚಲವಾಗಿ ನಿಂತುಬಿಟ್ಟಿತು. ಕುದುರೆಗಳು ಮಾತ್ರ ಎಳೆಯಲು ಇನ್ನೂ ಪ್ರಯತ್ನಿಸುತ್ತಲೇ ಇದ್ದುವು— ಎಂಬುದು ಇಲ್ಲಿನ ಭಾವಾರ್ಥ.

30 ದ್ರೌಪದಿಯನ್ನು ಜಯದ್ರಥ ಅಪಹರಿಸಿಕೊಂಡು ರಥಾರೂಢನಾಗಿ ಹೋಗುತ್ತಿದ್ದಾಗ ಭೀಮ ಪದಾತಿಯಾಗಿಯೇ ಹೋಗಿ ಅವನನ್ನು ತಡೆದು ಜಯಿಸಿದ ಎಂದು ಇಲ್ಲಿ ಹೇಳಿದೆ.

ಆದರೆ ಮಹಾಭಾರತ ವನಪರ್ವ ಅಧ್ಯಾಯ 260ರಲ್ಲಿ ಇಬ್ಬರೂ ಮೊದಲು ರಥಾರೂಢ ರಾಗಿಯೇ ಇದ್ದರೆಂದೂ ಆದರೆ ರಥದಿಂದಿಳಿದು ಯುದ್ಧಮಾಡಿದರೆಂದೂ ಹೇಳಿವೆ.

31 ಇಷ್ವಸ್ತ್ರಶಾಲಾ—ದ್ರೋಣನು ಶಿಷ್ಯರಿಗೆ ಧನುರ್ವಿದ್ಯೆ ಕಲಿಸುತ್ತಿದ್ದ ಜಾಗ.

32 ಭೀಮನ ವೇಗ ಶರವೇಗಕ್ಕಿಂತ ಹೆಚ್ಚಿನದು, ವಾಯುವೇಗ. ಅಭಿಮನ್ಯುವನ್ನು ಹಿಡಿದವನು ಭೀಮನೆಂಬುದು ತಿಳಿಯದೆಯೇ ದುರ್ಯೋಧನನು 'ಅವನಾರು ಹೇಳು, ಅವನು ವೇಗದಲ್ಲಿ ವಾಯುವೇ ಆದರೂ ನನಗೆ ಹೆದರಿಕೆ ಇಲ್ಲ' ಎಂದು iii 9ರಲ್ಲಿ ಹೇಳಿರುವುದನ್ನೂ ಇಲ್ಲಿ ಪರಿಶೀಲಿಸಬಹುದು.

33 ಅಹೋ ಹಾಸ್ಯಮಭಿಧಾನಂ—ಇದೇ ವಾಕ್ಯ ದೂತಘಟೋತ್ಕಚದಲ್ಲೂ ಪ್ರತಿಜ್ಞಾ ಯೌಗಂಧರಾಯಣದಲ್ಲಿ ಎರಡುಬಾರಿಯೂ ಬರುತ್ತದೆ. ...

36 ಪ್ರಯಾತೌ—ಇದು ಭೂತಕೃದಂತರೂಪ. ಮೊದಲನೆಯ ಪಾದದಲ್ಲಿ ಪ್ರಯಾಮಃ ಎಂಬ ವರ್ತಮಾನ ಕಾಲ ರೂಪವಿದೆ. ಆದ್ದರಿಂದ ಇಲ್ಲೂ ಪ್ರಯಾತಃ (ಪ್ರಯಾತೋ) ಎಂಬ ವರ್ತಮಾನ ಪ್ರಥಮಪುರುಷ ದ್ವಿವಚನರೂಪವಿರುವುದೇ ಸಂಗತ. [ಪ್ರ + ಯಾತಿ—ಯಾತಃ—ಯಾಂತಿ]. ಹಲಾಯುಧಃ—ಬಲರಾಮ.

37 ಫಲ್ಗುಣಂ—ಅರ್ಜುನನಿಗೆ ಈ ಹೆಸರು ಬರಲು ಕಾರಣ ನೋಡಿ—ಉತ್ತರಾಭ್ಯಾಂ ಫಲ್ಗುನೀಭ್ಯಾಂ ನಕ್ಷತ್ರಾಭ್ಯಾಮಹಂ ದಿವಾ। ಜಾತೋ ಹಿಮವತಃ ಪೃಷ್ಠೇ ತೇನ ಮಾಂ ಫಲ್ಗುನಂ ವಿದುಃ। ಮ. ಭಾ, ವಿರಾಟಪರ್ವ, ಅಧ್ಯಾಯ 44.

40-41 ವಿಸ್ಪಷ್ಟಂ ಖಲು ಕಥ್ಯತೇ; ನನು ಜಾನೀತೇ ಭವಾನ್ ಎಂಬ ಈ ಗದ್ಯವಾಕ್ಯವನ್ನು ಮುಂದಿನ ಬಾಣಪುಂಖಾಕ್ಷರೈಃ...ಎಂಬ ಶ್ಲೋಕದೊಡನೆ ಈರೀತಿ ಅನ್ವಯ ಮಾಡಿಕೊಳ್ಳಬೇಕು—ಹೇ ಗಾಂಧಾರೀಮಾತಃ, ಜ್ಯಾಜಿಹ್ವಾಪರಿವರ್ತಿಭಿಃ ಬಾಣ ಪುಂಖಾಕ್ಷರೈಃ ವಾಕ್ಯೈಃ 'ವಿಕೃಷ್ಟಂ ಖಲು ಪಾರ್ಥೇನ' ಇತಿ ವಿಸ್ಪಷ್ಟಂ ಕಥ್ಯತೇ ಖಲು! (ತಥಾಪಿ) ಸಃ (ಗಾಂಧಾರರಾಜಃ) ಶ್ರೋತ್ರಂ ನ ಪ್ರಯಚ್ಛತಿ ಚ॥—(ಏತತ್ ಸರ್ವಂ) ಭವಾನ್ ಜಾನೀತೇ ನನು? ಇಲ್ಲಿ ಭೀಷ್ಮ ಅರ್ಜುನನ ಬಾಣಗಳ ವೇಗವನ್ನು ಗುರುತಿಸಿ ಆದರಿಂದಲೇ ಬಾಣಪ್ರಯೋಗಮಾಡಿದವನು ಅರ್ಜುನನೇ ಎಂದು ಸಮರ್ಥಿಸುತ್ತಾನೆ. ಅದೇ ವೇಳೆಗೆ ಸೂತ ಬಂದು ಅರ್ಜುನನಾಮಾಂಕಿತವಾದ ಬಾಣವನ್ನು ತಂದುಕೊಡುವಂತೆಯೂ, ಆ ಹೆಸರನ್ನು ಶಕುನಿಯೇ ಓದಿ ಹೇಳುವಂತೆಯೂ ನಿರೂಪಿಸಿರುವುದು ಭಾಸನ ಸಂವಿಧಾನ ಕೌಶಲಕ್ಕೆ ನಿದರ್ಶನ.

52 ಯಾವತ್ ದೃಷ್ಟೋ ಯುಧಿಷ್ಠಿರೇ—ಯಾವತ್ ನ ದೃಷ್ಟಃ ಯುಧಿಷ್ಠಿರಃ ತಾವತ್ ನ ಪ್ರವಾಸ್ಯಾಮಿ. ಸತಿಸಪ್ತಮಿಯೊಡನೆ ಯಾವತ್ ಶಬ್ದದ ಪ್ರಯೋಗ ಆರ್ಷ.

60-65 ಈ ಸಂವಾದ ಧರ್ಮರಾಜನು ಎಲ್ಲಿದ್ದಾನೆ, ಎಂಬುದನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ. ಹಿಂದೆ iii 16ರಿಂದ 36ರ ವರೆಗಿನ ಸಂವಾದವು ಭೀಮನೇ ಅಭಿಮನ್ಯುವನ್ನು

ಎತ್ತಿಕೊಂಡು ಹೋದವನೆಂಬೂ iii[37] ರಿಂದ [63]ರ ವರೆಗಿನ ಸಂವಾದವು ಅರ್ಜುನನೇ ಅಂದು ವಿರಾಟನಕಡೆಯಿಂದ ಯುದ್ಧಮಾಡಿದವನೆಂದೂ ಅನುಮಾನ ಪ್ರಮಾಣ (inference) ದಿಂದ ಭೀಷ್ಮದ್ರೋಣರು ನಿರೂಪಿಸುತ್ತಿದ್ದರೂ ಶಕುನಿ ಅದನ್ನು ಒಪ್ಪದೆ ಅವರಲ್ಲಿ ದೋಷಗಳನ್ನು ತೋರಿಸುತ್ತಾ ವಿವಾದಮಾಡುತ್ತಿದ್ದಾಗ, ಅದೂ ಉತ್ತರನಿಂದ ಲಿಖಿತ ಪ್ರಮಾಣವನ್ನು ಹೊರತರಬೇಕೆಂದು ಶಕುನಿ ಒತ್ತಿ ಹೇಳುತ್ತಲೇ ಇರುವಾಗ, ಉತ್ತರನೇ ಪ್ರತ್ಯಕ್ಷವಾಗಿ ಧರ್ಮರಾಜನಕಡೆಯಿಂದ ಬಂದಿರುವುದಾಗಿ ಘೋಷಿಸುವುದು ಪಾಂಡವರು ಎಲ್ಲಿದ್ದಾರೆಂಬ ಬಗ್ಗೆ ಸಂದೇಹಕ್ಕೆ ಅವಕಾಶವೇ ಇಲ್ಲದಂತೆ ಮಾಡಿಬಿಡುತ್ತದೆ. ಇಂತಹ ಸಂದರ್ಭಗಳಲ್ಲೇ ನಾವು ಭಾಸನ ಸಂವಿಧಾನ ಕೌಶಲವನ್ನು ಗಮನಿಸಬೇಕಾದುದು.

67 ತತ್ರೈವ, ತತ್ರೈವ—I[13]ರ ಟಿಪ್ಪಣಿ ನೋಡಿ. ಪಾಂಡವರ ವೃತ್ತಾಂತ ಪಂಚರಾತ್ರದ ಅವಧಿಯೊಳಗೇ ತಿಳಿದು ಅರ್ಧ ರಾಜ್ಯ ಅವರಿಗೆ ಸಲ್ಲುವ ಸ್ಥಿತಿ ಒದಗಿ ಬಂದಿದ್ದರೂ ಶಕುನಿಗೆ ಅವರಮೇಲಣ ದ್ವೇಷ ಮಾತ್ರ ಇದ್ದೇ ಇತ್ತು. ಆದ್ದರಿಂದಲೇ ಅಭಿಮನ್ಯುವಿನ ಮದುವೆ ಅಲ್ಲೇ ವಿರಾಟನಗರದಲ್ಲೇ ಆಗಲಿ ಎಂದು, ದುರ್ಯೋಧನನ ಅಭಿಪ್ರಾಯ ತಿಳಿಯುವುದಕ್ಕೆ ಮುಂಚಿತವಾಗಿಯೇ, ಹೇಳಿಬಿಡುತ್ತಾನೆ.

68 ಇತ್ಯರ್ಥಂ=ತೀರ್ಮಾನಕ್ಕೆ; ಪಾಂಡವರು ವಿರಾಟನಗರದಲ್ಲಿದ್ದಾರೆಂಬ ಇತ್ಯರ್ಥಕ್ಕೆ. ಪಂಚರಾತ್ರಃ—ಈ ಪುಲ್ಲಿಂಗರೂಪ ಅಪಾಣಿನೀಯ. ಹಿಂದೆ ಇದೇ ನಪುಂಸಕಲಿಂಗದಲ್ಲಿ ಬಂದಿದೆ.

69 ವೃತೇಽಪಿ ಹಿ ...—ಇಲ್ಲಿ ವೃತ ಶಬ್ದ ವೃ ಧಾತುವಿನ ಭೂತಕೃದಂತ ರೂಪವಲ್ಲ. ವೃತಂ=ಯಾಚಿಸಿ ಪಡೆದ ಭೈಕ್ಷ್ಯ. ನೋಡಿ—ವೃತಂ ಸ್ಯಾದ್ಯಾಚಿತಂ ಭೈಕ್ಷ್ಯಂ ಅವೃತಂ ಸ್ಯಾದಯಾಚಿತಂ ||—ಮನು 4-45. ಈ ಅರ್ಥ ಇಲ್ಲಿ ಬಹಳ ಸಮಂಜಸವಾಗಿದೆ. ರಾಜ್ಯಾರ್ಧವು ದ್ರೋಣ ತಾನಾಗಿ ಯಾಚಿಸಿದ ದಕ್ಷಿಣೆ; (i[114]; i[118]; iii[69] ನೋಡಿ). ಆದ್ದರಿಂದ—ಹಿ ಯತಃ, ವೃತೇ ಅಪಿ ಯಾಚಿತೇ ಭೈಕ್ಷ್ಯವಿಷಯೇ ಅಪಿ, ಸತ್ಯೇ ತಿಷ್ಠತಿ ಸತಿ ಸರ್ವೇ ತಿಷ್ಠಂತಿ. ಸತ್ಯ (ಚ್ಯುತಿಯಿಲ್ಲದೆ) ನಿಂತರೆ, ಎಲ್ಲವೂ ಎಲ್ಲರೂ (ಯಾವ ಅಪಾಯವೂ ಇಲ್ಲದೆ) ನಿಲ್ಲುತ್ತಾರೆ. 'ಕೃಷ್ಣೇ ತಿಷ್ಠತಿ ಸರ್ವಮೇತದಖಿಲಂ ತಿಷ್ಠತಿ' ಎಂಬಂತೆ.

70 ಈ ಉತ್ತರಾರ್ಧವೇ ಪ್ರತಿಜ್ಞಾ, ಅಭಿಷೇಕ, ಅವಿಮಾರಕಗಳ ಭರತವಾಕ್ಯಗಳಲ್ಲೂ.

## DRAMA

| | Rs. | nP. |
|---|---|---|
| PAÑCARĀTRAM of Bhāsa *(Revised Fourth Edition)* | 4 | 50 |
| SVAPNA-VĀSAVADATTAM of Bhāsa | out of stock | |
| PRATIJÑĀ-YAUGANDHARĀYAṆAM *(Fourth Edition)* | 4 | 25 |
| PRATIMĀ-NĀṬAKAM of Bhāsa | 4 | 00 |
| ABHISHEKANĀṬAKAM of Bhāsa | out of stock | |
| KARṆABHĀRAM of Bhāsa | 1 | 12 |
| MĀLAVIKĀGNIMITRAM of Kālidāsa *(Revised Edition)* | 4 | 25 |
| ABHIJÑĀNA S'ĀKUNTALAM of Kāḷidāsa do | 4 | 50 |
| VIKRAMORVAS'IYAM of Kāḷidāsa do | 4 | 50 |
| NĀGĀNANDAM of S'rī Harṣa | 3 | 50 |
| RATNĀVALĪ of S'rī Harṣa | 3 | 00 |
| MUDRĀRĀKṢASAM of Vis'ākhadatta | 4 | 25 |

## CHAMPU

| | Rs. | nP. |
|---|---|---|
| NĪLAKAṆṬHA-VIJAYAM Chapter III *(Revised Edition)* | 2 | 25 |
| CAMPŪ-RĀMĀYAṆAM (Bālakāṇḍa) *(Revised Edition)* | 2 | 50 |
| CAMPŪ-RĀMĀYAṆAM (Ayodhyā Kāṇḍa) | 2 | 20 |
| CAMPŪ-RĀMĀYAṆAM (Kiṣkindhā Kāṇḍa) | 1 | 50 |
| CAMPŪ-RĀMĀYAṆAM (Sundara Kāṇḍa) | 2 | 40 |

## PROSE

| | Rs. | nP. |
|---|---|---|
| KĀDAMBARĪ PŪRVABHĀGA (Parts I & III) | out of stock | |
| KĀDAMBARĪ: do (Part II) | 3 | 00 |
| KĀDAMBARĪ: do (Part IV) | 2 | 50 |
| KĀDAMBARĪ: do (Parts V & VI) each | 2 | 75 |
| KĀDAMBARĪ : Mahās'vetā-vṛttānta, Eng. Trans. only | 2 | 00 |

## POETRY

| | Rs. | nP. |
|---|---|---|
| KUMĀRASAMBHAVAM Cantos I & II of Kāḷidāsa | No stock | |
| do Canto III with Kan. & Eng. Trans. Notes etc. | 2 | 25 |
| do Canto V — do — | 2 | 20 |
| do Canto VI — do — | 2 | 50 |
| RAGHUVAMS'AM Canto IV of Kālidāsa — do — | 1 | 12 |
| do XIII with Eng. & Kan. Trans. Notes, etc. | 1 | 50 |
| do XIV with Eng. & Kan. Trans. Notes etc. | 2 | 50 |
| BUDDHACARITA I with Eng. & Kan. Trans. Notes etc. | 2 | 25 |
| do III with Eng. & Kan. Trans. Notes etc. | 2 | 50 |
| NĪTIS'ATAKA & VAIRĀGYAS'ATAKA of Bhartṛhari | No stock | |

## GENERAL

| | Rs. | nP. |
|---|---|---|
| OUTLINES OF HISTORY OF CLASSICAL SKT. LITERATURE | 4 | 00 |